ಕಾಯಕವೇ ಕೈಲಾಸ

# ಸಿದ್ಧಗಂಗಾ





ಸಂಪುಟ : ೪೩ ಆಗಸ್ಟ್ ೨೦೦೭ ಸಂಚಿಕೆ : ೮



ಶ್ರೀಮಠಕ್ಕೆ ಸಮೀಪವಿರುವ ಶ್ರೀನಗರ ಬಡಾವಣೆಯಲ್ಲಿ ನವೀಕರಿಸಿರುವ ಪಿರಮಿಡ್ ಶ್ರೀ ರಾಜ್ ಚಿತ್ರಮಂದಿರವನ್ನು ಆಗಸ್ಟ್ ೧೦ ರಂದು ಪರಮಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು, ಚಿತ್ರ ನಿರ್ಮಾಪಕ ಶ್ರೀ ಸಾ.ರಾ. ಗೋವಿಂದು, ಪಿರಮಿಡ್ (ಪಿ.ಎಸ್.ಟಿ.ಎಲ್.) ಸಂಸ್ಥೆಯ ಆಡಳಿತ ಮಂಡಳಿಯವರು ಹಾಗೂ ಸಂಸ್ಥೆಯ ಪಾಲುದಾರರಾದ ಸರ್ವಶ್ರೀ ಎಂ.ಎನ್. ಲೋಕೇಶ್, ಟಿ.ಎನ್. ಶ್ರೀಕಂಠಸ್ವಾಮಿ, ಟಿ.ಎನ್. ಚನ್ನಬಸವ ಪ್ರಸಾದ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.




ಶ್ರೀಮಠದಲ್ಲಿ ಸಂಯುಕ್ತ ವಿದ್ಯಾರ್ಥಿ ಸಂಘದ ಉದ್ಘಾಟನೆಯನ್ನು ಆಗಸ್ಟ್ ೧೦ ರಂದು ಪೂಜ್ಯ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ನೆರವೇರಿಸಲಾಯಿತು. ಈ ಸಂದರ್ಭದಲ್ಲಿ ಸಚಿವ ಶ್ರೀ ಹೆಚ್.ಎಸ್. ಮಹದೇವ ಪ್ರಸಾದ್ ಹಾಗೂ ಶಿಕ್ಷಣ ಇಲಾಖೆಯ ಅಧಿಕಾರಿಗಳು ಉಪಸ್ಥಿತರಿದ್ದರು.



ವಿಶ್ವವಿಖ್ಯಾತ ಮೈಸೂರು ದಸರಾ ಉತ್ಸವ ಉದ್ಘಾಟನೆಯನ್ನು ನೆರವೇರಿಸುವಂತೆ ಪರಮಪೂಜ್ಯ ಶ್ರೀಗಳವರಿಗೆ ಆಗಸ್ಟ್ ೧೪ ರಂದು ಮೈಸೂರು ಜಿಲ್ಲೆ ಉಸ್ತುವಾರಿ ಸಚಿವ ಶ್ರೀ ಜಿ.ಟಿ. ದೇವೇಗೌಡರು ಶ್ರೀಮಠದಲ್ಲಿ ವಿಧ್ಯುಕ್ತವಾಗಿ ಆಹ್ವಾನಿಸಿದರು. ಈ ಸಂದರ್ಭದಲ್ಲಿ ರೇಷ್ಮೆ ಸಚಿವ ಶ್ರೀ ಎಸ್. ಶಿವಣ್ಣನವರು ಉಪಸ್ಥಿತರಿದ್ದರು.

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು",
'ಸಿದ್ಧಗಂಗಾ' ಮಾಸಪತ್ರಿಕೆ'
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಸೆನು ಬಸವೇಶ**

# ಸಿದ್ಧಗಂಗಾ


ಸಂಪುಟ : ೪೩ ಆಗಸ್ಟ್ ೨೦೦೭ ಸಂಚಿಕೆ : ೮


## ಒಳಪುಟಗಳಲ್ಲಿ ........................




ಚಂದಾ ವಿವರ :
ವಾರ್ಷಿಕ ಚಂದಾ ರೂ. ೧೨೦/- ಅಜೀವ ಸದಸ್ಯತ್ವ ರೂ. ೧೦೦೦/-
ಬಿಡಿ ಪ್ರತಿ ರೂ. ೧೦.೦೦

## ಅದ್ಭುತ

ಇತ್ತೀಚೆಗೆ ಎಲ್ಲ ಕಡೆಯಿಂದಲೂ, ಎಲ್ಲರಿಂದಲೂ ಕೇಳಿ ಬರುತ್ತಿರುವುದೊಂದೇ ಮಾತು. ಎಲ್ಲಿ ಹೋದರೂ, ಯಾರು ಕಂಡರೂ, ಆಪ್ತರು, ಆತ್ಮೀಯರು, ಬಂಧುಗಳು, ಮಿತ್ರರು, ಪರಿಚಿತರು, ಹತ್ತಿರದವರು, ದೂರದಲ್ಲಿರುವವರೂ ಪರಸ್ಪರ ಭೇಟಿಯಾದಾಗ ಮೊದಲು ಕೇಳುವ ಮಾತು 'ಸ್ವಾಮಿಗಳು ಹೇಗಿದ್ದಾರೆ? ಆರೋಗ್ಯವಾಗಿದ್ದಾರೆ ತಾನೇ? ಮೊದಲಿದ್ದಂತೆಯೇ ಚೆನ್ನಾಗಿದ್ದರಲ್ಲವಾ?' ಎಂಬುದಾಗಿ. ಮರುಕ್ಷಣವೇ ಆಡುವ ಮಾತೆಂದರೆ 'ಸ್ವಾಮಿಗಳಿನ್ನು ಪ್ರಯಾಣ ಮಾಡುವುದನ್ನು ನಿಲ್ಲಿಸಿ ಬಿಡಬೇಕು. ದೂರ ದೂರಗಳಿಗಂತೂ ಪ್ರವಾಸ ಮಾಡಲೇ ಬಾರದು. ವಯಸ್ಸಾಯಿತು. ನೂರು ವರ್ಷವೆಂದರೆ ಸಾಮಾನ್ಯವೆ? ದೇಹಕ್ಕೂ ಒಂದು ಧರ್ಮವಿದೆಯಲ್ಲವೇ'? ಮುಂತಾಗಿ ತಮ್ಮ ಅಭಿಮಾನವನ್ನು, ಭಕ್ತಿಭಾವವನ್ನು ಸ್ವಾಮಿಗಳ ಬಗ್ಗೆ ಇರುವ ಅಪಾರ ಗೌರವವನ್ನು ಮುಕ್ತವಾಗಿ ವ್ಯಕ್ತಪಡಿಸುತ್ತಾರೆ. ಭಕ್ತರ ಬಿನ್ನಹ, ಬಿಡುಗಡೆ, ಶಿವಪೂಜೆ, ಪಾದಪೂಜೆಗಳನ್ನು ಕುರಿತೂ ವಿನಮ್ರವಾಗಿ ತಮ್ಮ ಅಭಿಪ್ರಾಯಗಳನ್ನು ಅನಿಸಿಕೆಗಳನ್ನು ಆಡಿ ತೋರಿಸುತ್ತಾರೆ. 'ಪೂಜೆಗೆ ಮಾತ್ರ ಒಪ್ಪಿಗೆ ಕೊಡಲಿ' ಎಂದೂ ಹೇಳುತ್ತಾರೆ. ಇನ್ನೂ ಮುಂದುವರಿದು ಕೆಲವರು 'ನೀವು ದಿನವೂ ಸ್ವಾಮಿಗಳ ಸಾನ್ನಿಧ್ಯದಲ್ಲಿರುವವರು, ಮಠದ ದೈನಂದಿನ ಚಟುವಟಿಕೆಗಳಲ್ಲಿ ತೊಡಗಿರುವವರು, ಅಷ್ಟೊಂದು ಜನರಿದ್ದೀರಿ, ಅವಕಾಶ ನೋಡಿ, ಸಮವರಿತು, ಸಂದರ್ಭ ನೋಡಿ, ಮನಸ್ಥಿತಿಯನರಿತು ಸ್ವಾಮಿಗಳವರಲ್ಲಿ ಅರಿಕೆ ಮಾಡಿಕೊಳ್ಳಬೇಕು. ಸಾಧ್ಯವಾದಷ್ಟೂ ಶ್ರೀಗಳವರ ಮನ ಒಲಿಸುವ ಪ್ರಯತ್ನ ಮಾಡಬೇಕು' ಎಂದೂ ಪ್ರೀತಿಯ ಆದೇಶ ಕೊಡುತ್ತಾರೆ. 'ಅವರೊಂದು' ಸ್ವಾಮಿಗಳ ಸಮೂಹದ ಅದ್ಭುತ'. ಸನ್ಯಾಸಕ್ಕೆ, ಆಧ್ಯಾತ್ಮಿಕತೆಗೆ ಹೊಸ ಅರ್ಥವನ್ನು ಬರೆಯುತ್ತಿರುವ ಅಪರೂಪದ ದಿವ್ಯ ಚೇತನ. ಅವರಿಂದ ಅಸಂಖ್ಯಾತರು ಬೆಳಕು ಕಂಡಿದ್ದಾರೆ. ಲೋಕಕ್ಕೆ ಹೊಸ ಬೆಳಕು ತೋರಿಸುತ್ತ ಹೊರಟಿದ್ದಾರೆ. ತಾವು ನಂಬಿರುವ ತತ್ವಗಳಿಗೆ ಚ್ಯುತಿ ಬರದಂತೆ ಮಾರ್ಗ ಕ್ರಮಿಸುತ್ತಿದ್ದಾರೆ. ಶತಾಯುಷಿಗಳಾಗುತ್ತಿದ್ದು ಶಿವಸೃಷ್ಟಿಯ ಸಂವರ್ಧನೆಗೆ ಸೌಂದರ್ಯಕ್ಕೆ ಹಗಲಿರುಳು ಶ್ರಮಿಸುತ್ತಿದ್ದಾರೆ- ಎಂಬ ಸದ್ಭಾವದ ಮೃದು ನುಡಿಗಳನ್ನು ಕೇಳುವ ಪುಣ್ಯ 'ಸಿದ್ಧಗಂಗಾ' ದ್ದಾಗಿದೆ.

– ಸಂಪಾದಕ





## ನಂಬಿಕೆ

ಅಮಾವಾಸ್ಯೆ, ಹುಣ್ಣಿಮೆ ದಿನಗಳಂದು ಶ್ರೀಮಠಕ್ಕೆ ಬರುವ ಭಕ್ತಾದಿಗಳ ಸಂಖ್ಯೆ ದಿನದಿಂದ ದಿನಕ್ಕೆ ಏರುತ್ತಲೇ ಬರುತ್ತಿದೆ. ನಮಗಂತೂ ಆಶ್ಚರ್ಯವಾಗುತ್ತದೆ. ಬಂದವರೆಲ್ಲ ತಮ್ಮ 'ನಂಬಿಕೆ'ಯನ್ನು ಎಚ್ಚರವಾಗಿ ಕಾಪಾಡಿಕೊಂಡು ಬರುವವರೇ ಆಗಿರುತ್ತಾರೆ. ಅವರೆಲ್ಲ ಶ್ರೀಮಠದಲ್ಲಿ ನಮ್ಮ ಪೂಜ್ಯ ಗುರುಗಳ ಕಾಲದಿಂದ ನಡೆದು ಬಂದಿರುವ ಯಂತ್ರ ಕಟ್ಟಿಸಿಕೊಳ್ಳುವ, ಮಂತ್ರಿಸಿದ ದಾರ ಹಾಕಿಸಿಕೊಳ್ಳುವ, ದಿಗ್ಬಂದನದ ಕಾಯಿ ಪಡೆದುಕೊಳ್ಳುವ, ತಾಯಿತ ಕಟ್ಟಿಸಿಕೊಳ್ಳುವ, ನಿಂಬೆಹಣ್ಣು ಮಂತ್ರಿಸಿಕೊಳ್ಳುವ ಹಂಬಲವುಳ್ಳವರಾಗಿರುತ್ತಾರೆ. ಅದಕ್ಕಾಗಿ ನೂರಾರು ಮೈಲಿಗಳ ದೂರವನ್ನು ಲೆಕ್ಕಿಸದೆ ಬರುತ್ತಾರೆ. 'ನಂಬಿ ಕೆಟ್ಟವರಿಲ್ಲ' ಎಂಬುದನ್ನು ತಮ್ಮ ನಡೆ–ನುಡಿ–ಚಿಂತನೆ–ಆಚರಣೆಗಳಲ್ಲಿ ಕಾಪಾಡಿಕೊಂಡು ಬಂದವರಾಗಿರುತ್ತಾರೆ. ತಮ್ಮ ನೋವು, ಆತಂಕ, ಭಯ, ಭೀತಿಗಳಿಂದ, ಗ್ರಹಚಾರಗಳಿಂದ ಮುಕ್ತರಾಗುವ 'ನಂಬಿಕೆ' ಯುಳ್ಳವರಾಗಿರುತ್ತಾರೆ. ಆ ನೋವು, ಆತಂಕ, ಭಯ ಭೀತಿಗಳಾದರೂ ಸಾವಿರ ಸಾವಿರ ರೂಪದಲ್ಲಿ ಅವರನ್ನು ಭಯದ ಲೋಕಕ್ಕೆ ತಳ್ಳುತ್ತದೆ. ಅವುಗಳಿಂದ ಪಾರಾಗಲು ಅವರಿಗಿರುವ ಮಾರ್ಗ ಯಂತ್ರಧಾರಣೆ, ತಾಯಿತದ ಆಸರೆ, ಮಂತ್ರ ದಾರದ ಅವಲಂಬನೆ, ನಿಂಬೆಹಣ್ಣಿನ ಇಂಬು, ದಿಗ್ಬಂಧನದ ರಕ್ಷೆ. ಅವುಗಳಲ್ಲಿ ಅವರಿಟ್ಟುಕೊಂಡು ಬಂದಿರುವ ಅಚ್ಚಳಿಯದ 'ನಂಬಿಕೆ' ರೋಗ ನಿವಾರಣೆಗಾಗಿ, ಗ್ರಹಗಳ ಮುಕ್ತಿಗಾಗಿ, ಕಲಹ ಬಿಡುಗಡೆಗಾಗಿ, ಸಂತಾನಪ್ರಾಪ್ತಿಗಾಗಿ, ಹೊಲಗದ್ದೆಗಳ ಫಲವತ್ತತೆಗಾಗಿ, ಮಕ್ಕಳ ಆಯುರಾರೋಗ್ಯ ಸಮೃದ್ಧಿಗಾಗಿ ಯಂತ್ರ, ತಾಯಿತ, ದಾರ, ನಿಂಬೆಹಣ್ಣು, ವಿಭೂತಿ- ಮುಂತಾದುವುಗಳನ್ನು ಬೇಡಿ ಬರುತ್ತಾರೆ. ಅವರ 'ನಂಬಿಕೆ' ದೊಡ್ಡದು. ಆ 'ನಂಬಿಕೆ'ಯಲ್ಲಿ ಅವರು ದೇವರನ್ನು ಕಾಣುವವ ರಾಗಿರುತ್ತಾರೆ. ಹಾಗೆ ಬರುವವರಲ್ಲಿ ಮುಗ್ಧರಿರುತ್ತಾರೆ, ಬುದ್ಧಿವಂತರಿರುತ್ತಾರೆ, ವೈದ್ಯರಿರುತ್ತಾರೆ, ನ್ಯಾಯವಾದಿಗಳಿರುತ್ತಾರೆ, ಪ್ರಾಧ್ಯಾಪಕರಿರುತ್ತಾರೆ, ವಿಜ್ಞಾನಿಗಳಿರುತ್ತಾರೆ. ಅವರೆಲ್ಲ ಒಂದು ಘಟ್ಟದಲ್ಲಿ 'ಈ ಕ್ರಿಯೆ' ಯನ್ನು ಪ್ರಶ್ನಿಸಿದವರಾಗಿರುತ್ತಾರೆ, ತರ್ಕ, ಚರ್ಚೆ, ವಿಚಾರಮಂಥನ, ವಿಶ್ಲೇಷಣೆ, ವ್ಯಾಖ್ಯಾನ ಮಾಡಿದವರೂ ಆಗಿರುತ್ತಾರೆ. ಆದಾಗ್ಯೂ ಬಂದಿರುತ್ತಾರೆ. ಕೆಲವರು ನಮ್ಮ 'ಈ ಕ್ರಿಯೆ'ಯನ್ನು ಕುರಿತು ಆಕ್ಷೇಪಿಸುವವರೂ ಇರುವುದನ್ನು ಕೇಳಿದ್ದೇವೆ. ಆದರೆ ನಮಗೆ ಯಾರ 'ನಂಬಿಕೆ' ಯನ್ನು ಅಗೌರವಿಸುವ ಮನೋಭಾವವಿಲ್ಲ. 'ಅವರವರ ಭಾವಕ್ಕೆ ಅವರವರ ಭಕುತಿಗೆ' ಸ್ಪಂದಿಸುವುದೊಂದನ್ನು 'ನಂಬಿಕೆ'ಯನ್ನಾಗಿಸಿಕೊಂಡವರಾಗಿದ್ದೇವೆ.

*





## ಶ್ರೀ ಸಿದ್ಧಲಿಂಗೇಶ್ವರ ವಚನ

*ಕರ್ಣದ ಕೊನೆಯಲೆರಡು ಪರ್ಣಗಳುದಿಸಿ*
*ನಿರ್ನಾಮಶ್ರುತವ ನೆಲೆಗೊಳಲೀಸವು ನೋಡಾ*
*ಕರ್ಣದ ಕೊನೆಯ ಪರ್ಣವ ಹರಿದು*
*ನಿರ್ಮಲ ನಿರಾವಣನೆ ಕರ್ಣವಾಗಿರ್ಪ*
*ಪ್ರಭುದೇವರ ಪಾದಕ್ಕೆ ನಮೋನಮೋಯೆಂಬೆನು*
*ಕಾಣಾ ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭುವೇ.*

ಆತ್ಮನು ದೇಹ ಸಂಬಂಧಿ. ಆ ದೇಹಕ್ಕೆ ಕಿವಿಗಳೆರಡು. ಆ ಕಿವಿಗಳಲ್ಲಿ ಕುಶಬ್ದ ಸುಶಬ್ಧಗಳೆಂಬ ಎರಡು ಎಲೆಗಳುದಯ. ಆ ಎಲೆಗಳು ನಾಮಾತೀತವಾದ ಪರಶಿವ ಲಿಂಗದ ಪೂಜಾಸ್ತೋತ್ರ ಧ್ಯಾನವೆಂಬ ಸ್ಮರಣೆಯ ನಾಲಿಸಲೀಸವು. ಅಂಥ ಜೀವನ ಶ್ರವಣೇಂದ್ರಿಯಗಳಿಗೆ ತಟ್ಟುವ ಕುಶಬ್ಧ ಹಿಂಸಾಶಬ್ದವೆಂಬ ಮಹಾಶಬ್ಧಗಳ ವ್ಯಾಪಾರವನ್ನು ಅಷ್ಟಾವರಣದ ಭಕ್ತಿಯ ಕಥೆಯ ಕೇಳಿಕೆಯಿಂದ ನಿವೃತ್ತಿಗೊಳಿಸಿ, ಮಾಯಾವರಣರಹಿತವಾದ ಸ್ವಚ್ಛವೇಕಾದ ಪರಬ್ರಹ್ಮದ ಮಂತ್ರ ಕೇಳಿಕೆಯ ಅನಾಹತ ಕರ್ಣದ್ವಾರವನುಳ್ಳ ಪ್ರಭುಸ್ವಾಮಿಗಳ ಚರಣಪದ್ಮಗಳಿಗೆ ಸುಜ್ಞಾನಿಯಾದ ಶರಣನು ನಮಸ್ಕಾರ ನಮಸ್ಕಾರ ಎನುತ್ತಿದ್ದನು- ಎನ್ನುತ್ತದೆ ವಚನ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ- ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ – ಡಂಬಳ- ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಎಲ್ಲ ಬಲ್ಲಿದನಾದ ಎಲ್ಲರ ಚಿಂತಿಪ
ಎಲ್ಲವನೊಳಕೊಂಡ ಶಿವರೂಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತಾಯಾಗಿ ಸಲಹಿದೆ ಪಿತನಾಗಿ ಪೊರೆದೆ
ಸಕಲ ಬಂಧುವಾಗಿ ತಬ್ಬಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮೇರುಪರುಷ ನೀನು ದೇವ ಸಿರಿಗಂಗೆ ನೀನು
ಸಾಧು ಚಂದನದ ದೊರೆ ನೀನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನ ನಾಮವೆ ನನಗೆ ಪರಮ ಪಂಚಾಕ್ಷರಿ
ನಿನ್ನ ನುಡಿಯೇ ನನಗೆ ಶಿವತತ್ವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮನರಿಯುವುದೇ ವೇದದ ಅರಿವೆಂಬೆ
ನಿಮ್ಮನರಿವುದೇ ಶಿವಶಾಸ್ತ್ರ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶುಭಲಗ್ನ ನೀ ಬರಲು ಶುಭಕೂಟ ನೀನಿರಲು
ಶುಭಬಲ ಸಾವಿರ ನೆನೆಯಲು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪಾಪಸಾವಿರ ದೂರ ನಾಮಸ್ಮರಣೆಯಾ ಮಾಡೆ
ಪುಣ್ಯಸಾವಿರ ಸಾರ ದರುಶನದಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಕಾಲಾಸೆಹೆಳವನಿಗೆ ಕಣ್ಣಾಸೆ ಕುರುಡನಿಗೆ'
ನಿನ್ನಾಸೆ ನನಗೆ ಅನುಗಾಲ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತನುಮುಟ್ಟಿ ಮಾಡೆಂದೆ ಮನಮುಟ್ಟಿ ಮಾಡೆಂದೆ
ಧನಮುಟ್ಟಿ ಮಾಡೆಂದೆ ದಾಸೋಹ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾತಿನಮಲ್ಲರ ನೀ ಕಂಡು ನಗುತಿರುವೆ
ನೀತಿ ಶುದ್ಧರ ಕಂಡು ನಗುತಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ತಪೋವನದ ಕುಮಾರಸ್ವಾಮಿಗಳು

– ಈರಯ್ಯ ಕಿಲ್ಲೇದಾರ, ಕವಿತಾ ಪ್ರಕಾಶನ, ಗುಡಿಕಟ್ಟೆ –591104, ಬೆಳಗಾವಿ ಜಿಲ್ಲೆ.

ದೇಶದ ಇತಿಹಾಸದಲ್ಲಿ ಮಾನವನ ವೈಚಾರಿಕೆಯನ್ನು ಮೇಲಕ್ಕೆತ್ತಿದ್ದ ಸಾವಿರಾರು ಮಹಾನುಭಾವಿಗಳು ದಾಖಲೆಗೊಂಡಿದ್ದಾರೆ. ಸಂನ್ಯಾಸಿಗಳು, ವಿರಕ್ತರು, ಜಂಗಮರು, ಸಾಧುಗಳು, ಶರಣರು ಮತ್ತು ದಾಸರು ಈ ಭೂಮಿಯನ್ನು ಪುಣ್ಯದ ಬೀಡಾಗಿಸಿದ್ದಾರೆ. ಅಂತಹವರಲ್ಲಿ ಇತ್ತೀಚೆಗೆ ಲಿಂಗೈಕ್ಯರಾದ ಶ್ರೀ ಕುಮಾರಸ್ವಾಮಿಗಳು ಅಗ್ರಗಣ್ಯರೆನಿಸಿದ್ದಾರೆ. ತಪೋವನದ ತಪಸ್ವಿಗಳೆಂದೇ ಅವರು ಚಿರಪರಿಚಿತರಾಗಿದ್ದಾರೆ. 'ಬದುಕಿನ ಗುರಿ ಏನು? ಜೀವನದ ಅರ್ಥ ಏನು? ಜನನದ ಉದ್ದೇಶ ಯಾವುದು? ಈ ಜೀವನದ ಸಾರ್ಥಕತೆ ಎಂತು? ಇಂತಹ ಹಲವಾರು ಮೂಲಭೂತ ಪ್ರಶ್ನೆಗಳ ಬಗ್ಗೆ ಚಿಂತನೆ ಮಾಡಿ ಸಮಾಜಕ್ಕೆ ಮಾರ್ಗದರ್ಶನ ಮಾಡಿದ ಸ್ವಾಮಿಗಳು ಒಬ್ಬ ಅಪೂರ್ವ ಯೋಗಿಗಳೆನಿಸಿದ್ದಾರೆ. ಸದಾ ಅಂತರ್ಮುಖಿಯಾಗಿ ಜಪ, ತಪ, ಅನುಷ್ಠಾನಗಳಲ್ಲಿ ಕಾಲ ಕಳೆಯದೆ ಆಗಾಗ ಜನ–ಮನ ತಿದ್ದುವ ಸಲುವಾಗಿ ದಿವ್ಯ ದರ್ಶನ ನೀಡುತ್ತಿದ್ದರು. ಗವಿಯಲ್ಲಿ ಕುಳಿತು ಆತ್ಮೋದ್ಧಾರದ ಜೊತೆಗೆ ಸಮಾಜೋದ್ಧಾರದ ಕಾಯಕವನ್ನು ಕೈಕೊಂಡಿದ್ದರು. ಲೋಕವೇ ತಾನಾದ ಬಳಿಕ ಏಕಾಂತದ ಹಂಗೇಕೆ? ಎಂಬ ಅಕ್ಕಮಹಾದೇವಿಯ ವಚನದಂತೆ ಸ್ವಾಮಿಗಳಿಗೆ ಏಕಾಂತದ ಜೊತೆಗೆ ಲೋಕಾಂತವು ಹಾಸುಹೊಕ್ಕಾಗಿತ್ತು.

ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲ್ಲೂಕಿನ ಹುಣಸಿಕಟ್ಟೆ ಗ್ರಾಮದಲ್ಲಿ ೧೯೧೯ನೇ ಆಗಸ್ಟ್ ೨ರಂದು ನೂಲ ಹುಣ್ಣಿಮೆಯ ದಿವಸ ಕುಮಾರಸ್ವಾಮಿಗಳು ಜನಿಸಿದರು. ಚಿಕ್ಕ ವಯಸ್ಸಿನಲ್ಲೇ ಅವರು ಅಪಾರ ಪಾಂಡಿತ್ಯವನ್ನು ಹೊಂದಿದ್ದರು. ವೀರರಾಣಿ ಚೆನ್ನಮ್ಮನ ನಾಡಿನ ಅಂಬಡ ಗಟ್ಟಿಯಲ್ಲಿ ಡಾ॥ ಜ.ಚ.ನಿ. ಯವರು ಜನಿಸಿದ ಸಮೀಪದ ಊರಲ್ಲೇ ಕುಮಾರಸ್ವಾಮಿಗಳು ಜನಿಸಿದ್ದು ಈ ನಾಡಿನ ಪುಣ್ಯವಿಶೇಷವಾಗಿದೆ. ಹಿಂದಿನ ಬಿ.ಎ. ಪದವಿ ಪಡೆದು ದೇಶ ವಿದೇಶಗಳ ತತ್ವಜ್ಞಾನವನ್ನು ಅಧ್ಯಯನ ಮಾಡಿದ್ದರು. ೧೯೩೩ರಲ್ಲಿ ಧಾರವಾಡಕ್ಕೆ ಹೋಗಿ ಅಲ್ಲಿಯ ಗುರುಸಿದ್ಧ ಪ್ರಭುದೇವರ ಅನುಗ್ರಹ ಪಡೆದರು. ಅದೇ ವರ್ಷ ಸ್ವಾಮಿಗಳು ಆಶ್ರಮ ಧರ್ಮ ಸ್ವೀಕರಿಸಿದರು. ೧೨ನೆಯ ಶತಮಾನದ ಶರಣರ ವಚನಗಳನ್ನು ಅಧ್ಯಯನ ಮಾಡಿ ಅನುಭವ ಮಂಟಪದ ಮಾದರಿಯನ್ನು ಆಧುನಿಕ ಸಮಾಜಕ್ಕೆ ಹೊಂದಿಕೆಯಾಗುವ ರೀತಿಯಲ್ಲಿ ಮೇಳೈಸಿದರು.

೧೯೩೫ ರಲ್ಲಿ ನವಕಲ್ಯಾಣ ಮಠದ ಮೂಲಕ ಲಿಂಗಾಯತ ತತ್ವಜ್ಞಾನದ ರಹಸ್ಯವನ್ನು ಜನತೆಗೆ ತಿಳಿಸಿಕೊಡುವ ಪ್ರತಿಜ್ಞೆಗೈದರು. ಅದರ ಪ್ರಕಾರ ರಾಜ್ಯದ ನೂರಾರು ನಗರಗಳಲ್ಲಿ, ಹಳ್ಳಿಗಳಲ್ಲಿ ಮತ್ತು ಪಟ್ಟಣಗಳಲ್ಲಿ ವಾರ, ಎರಡುವಾರ ಮತ್ತು ತಿಂಗಳುಗಟ್ಟಲೆ ಸಾವಿರಾರು ವ್ಯಾಖ್ಯಾನಗಳನ್ನು ಮಾಡುತ್ತ ಸಂಚಾರ ಮಾಡಿದರು. ದೇಶ–ವಿದೇಶಗಳ ಧಾರ್ಮಿಕ ಸಮ್ಮೇಳನಗಳಲ್ಲಿ ಪ್ರಬಂಧಗಳನ್ನು ಮಂಡಿಸಿದರು. ಅವರ ಪ್ರವಚನ ಕೇಳಿ ಬೆರಗಾಗದವರಿಲ್ಲ. ಒಂದೇ ವೇಳೆಗೆ ಮೂರು, ನಾಲ್ಕು ಭಾಷೆಗಳಲ್ಲಿ ನಿರರ್ಗಳವಾಗಿ ಅದೇ ವಿಷಯವನ್ನು ಜನರ ಮುಂದೆ ಮಂಡಿಸುತ್ತಿದ್ದರು.

೧೯೪೯ನೇ ಜೂನ್ ೧ರಂದು ಸಂನ್ಯಾಸ ಸ್ವೀಕರಿಸಿ ನಿರ್ಲಿಪ್ತರಾಗಬಯಸಿದ್ದರು. ಅದು ಸಾಧ್ಯವಾಗಲಿಲ್ಲ. ೧೯೬೫ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಸಮೀಪದ ತಪೋವನದಲ್ಲಿ ಧ್ಯಾನಮಂದಿರ ನಿರ್ಮಿಸಿಕೊಂಡು ಅನುಷ್ಠಾನದಲ್ಲಿ ತೊಡಗಿದ್ದರು. ತಪೋವನವು ಹೂವು, ಕಾಯಿ, ಹಣ್ಣು ಮತ್ತು ಹಚ್ಚ ಹಸುರಿನ ಗಿಡ, ಮರ, ಬಳ್ಳಿಗಳಿಂದ ನಳನಳಿಸುತ್ತಿರುವಂತೆ ಸ್ವಾಮಿಗಳ ತಪಸ್ಸಿನ ಪ್ರಭಾವದಿಂದ ಧನ್ಯತೆಯನ್ನು ಮತ್ತು ಪಾವಿತ್ರ್ಯತೆಯನ್ನು ಪಡೆದು ನೆಲದ ಮೇಲಿನ ಸ್ವರ್ಗ ಎನಿಸಿತು.

ಶಿವಯೋಗದ ಮೂಲಕ ಮೂರನೆಯ ಕಣ್ಣನ್ನು ತೆರೆಯಿಸುವ ವಿಧಾನವನ್ನು ಜನತೆಗೆ ಪರಿಚಯಿಸಿ ಕೊಟ್ಟವರಲ್ಲಿ ಇವರು ಪ್ರಮುಖರಾಗಿದ್ದಾರೆ. ಲಿಂಗಪೂಜೆಯ ವೈಜ್ಞಾನಿಕ ಹಿನ್ನಲೆಯನ್ನು, ಪ್ರಾಯೋಗಿಕ ಆಚರಣೆಯನ್ನು ಅವರು ಪರಿಚಯಿಸಿಕೊಟ್ಟಿದ್ದಾರೆ. 'ಲಿಂಗಪೂಜೆ' ಎಂದರೆ 'ಅನಿಷ್ಟದೊಡನೆ ಹೋರಾಡುವುದು' ಎಂದು ವ್ಯಾಖ್ಯಾನ ನೀಡಿದ್ದಾರೆ. ಆತ್ಮ ಚಿಂತನೆಯ ಜೊತೆಗೆ ಅಪರಿಮಿತ ಜ್ಞಾನವನ್ನು ಅವರು ಹೊಂದಿದ್ದರು. ಲಿಂಗ ಕೇವಲ ದೇವರಲ್ಲ. ಬೇಡಿದ್ದನ್ನು ಪಡೆಯಲು ಸಾಧನ 'ಇಷ್ಟಲಿಂಗ' ಎನಿಸಿದೆ. ಬಸವಣ್ಣ, ಲಿಂಗ ಮತ್ತು ಶರಣರ ವಚನಗಳು ಲಿಂಗಾಯತರ ಸ್ವತ್ತಲ್ಲ. ಬಸವಣ್ಣ ವಿಶ್ವವಿಭೂತಿ ಪುರುಷ

ನಾಗಿದ್ದಾನೆ. ಜಂಗಮತ್ವ ಜಾತಿಯಿಂದ ಬರಲಾರದು. ಆಚರಣೆಯಿಂದ, ಸದಾಚಾರದಿಂದ ಮನುಷ್ಯ ಶ್ರೇಷ್ಠನೆನಿಸುತ್ತಾನೆ. ಇದು ನವಕಲ್ಯಾಣ ಮಠದ ತತ್ವ ಪ್ರಣಾಲಿಕೆ. ಅದನ್ನೇ ಕುಮಾರಸ್ವಾಮಿಗಳು ಪ್ರಚಾರ ಮಾಡಿದರು.

ಲಿಂಗವನ್ನು ಸಂಕುಚಿತ ಅರ್ಥದಲ್ಲಿ ಬಳಸುವುದನ್ನು ಖಂಡಿಸಿದರು. ಲಿಂಗದ ಅರ್ಥವನ್ನು ವಿಶಾಲ ಅರ್ಥದಲ್ಲಿ ವಿವರಿಸಿ ಹೇಳಿದರು. ಲಿಂಗಾಯತ ದೇವರು ನಿರಾಕಾರ ಎಂಬ ತತ್ವವನ್ನು ತಳಹದಿಯಾಗಿಟ್ಟುಕೊಂಡು ತಪೋವನದಲ್ಲಿ 'ದಿವ್ಯ ದೇವಾಲಯ'ವೊಂದನ್ನು ನಿರ್ಮಿಸಿದ್ದಾರೆ. ಅಲ್ಲಿ ಯಾವ ದೇವರಿಲ್ಲ ದೇವರ ಮೂರ್ತಿ ಇಲ್ಲ. ಪೂಜೆ ಅಭಿಷೇಕಗಳ ಜಂಜಾಟ ಇಲ್ಲ. ಬದಲಾಗಿ ಕೇವಲ ಮೌನ ಅನುಸಂಧಾನಕ್ಕೆ ಅವಕಾಶ ಇದೆ. ಲೌಕಿಕದ ಬಿಸಿಲಲ್ಲಿ ಬಸವಳಿದವರಿಗೆ ಅಲೌಕಿಕ-ಆಧ್ಯಾತ್ಮಿಕ ನೆರಳನ್ನು- ತಂಪನ್ನು ಮನಕ್ಕೆ ಶಾಂತಿ ಮತ್ತು ಸಮಾಧಾನ ನೀಡುತ್ತಿದ್ದರು. ಸುಖ-ದುಃಖಗಳನ್ನು ಮೀರಿ ನಿಲ್ಲಲು ಯೋಗವು ಹೇಗೆ ಸಹಕಾರಿಯಾಗಿದೆ ಎಂಬುದನ್ನು ಹೃದಯಂಗಮವಾಗಿ ವಿವರಿಸುತ್ತಿದ್ದರು.

ಯೋಗವು ಸಾಮಾನ್ಯರಿಗೆ ನಿಲುಕಲಾರದ ಸಂಗತಿಯಾಗಿತ್ತಷ್ಟೇ. ಜನರ ಆಡು ಮಾತಿನಲ್ಲಿ ಜನಸಾಮಾನ್ಯರಿಗೆ ತಿಳಿಯುವಂತೆ ಪರಿಭಾಷೆಯನ್ನು ಬಳಸುತ್ತಿದ್ದರು. ಯೋಗ-ಶಿವಯೋಗವನ್ನು ಕುರಿತಂತೆ ಕುಮಾರಸ್ವಾಮಿಗಳು ಯೋಗದ ಬಗೆಗಿದ್ದ ತಿಳುವಳಿಕೆಯಲ್ಲಿ ಒಂದು ಹೊಸ ದೃಷ್ಟಿಕೋನವನ್ನು ರೂಪಿಸಿದರು. ಅದರಂತೆ ವಿದ್ವಾಂಸರಲ್ಲಿ ಯೋಗ ಸಾಧಕರಲ್ಲಿ ಮತ್ತು ತತ್ವಜ್ಞಾನಿಗಳಲ್ಲಿ ಯೋಗದ ಬಗ್ಗೆ ನವೀನ ವಿಚಾರ ಪ್ರಣಾಲಿಕೆಯನ್ನು ಪ್ರತಿಪಾದಿಸಿದರು. ಒಟ್ಟಿನಲ್ಲಿ ಕುಮಾರಸ್ವಾಮಿಗಳು ಯೋಗದ ಪರಿಕಲ್ಪನೆ ಜನಸಾಮಾನ್ಯರಿಗೂ ಅರ್ಥವಾಗಲು, ಅಳವಡಿಸಿಕೊಳ್ಳಲು ಅನುವು ಮಾಡಿಕೊಟ್ಟರು. ರಾಜಯೋಗ, ಹಠಯೋಗ, ಪ್ರಾರ್ಥನಾಯೋಗ ಅದರಲ್ಲಿ ಶಿವಯೋಗದ ಸಾಧನೆ ಮಾಡಿದ್ದರು. ಪರಕಾಯ ಪ್ರವೇಶವನ್ನು ಮಾಡುವ ಯೋಗದ ಬಗ್ಗೆಯೂ ಅವರಿಗೆ ಕರತಲಾಮಲಕ ಎನಿಸಿತ್ತು. ಅವರು ಲಿಂಗೈಕ್ಯರಾಗುವ ಮೊದಲು ತಪೋವನದಲ್ಲಿ ನೆರೆದ ಭಕ್ತ ಸಮೂಹದ ಮುಂದೆ ಪರಕಾಯ ಪ್ರವೇಶದ ಬಗ್ಗೆ ವಿವರಿಸಿ ಹೇಳಿದ್ದರು. ಶಿವಯೋಗ ಸಾಧನೆಯಿಂದ ಹೃದಯ ಬೇನೆ ನಿವಾರಣೆಯಾಗುವುದೆಂದು ತೋರಿಸಿಕೊಟ್ಟಿದ್ದರು.

ಕುಮಾರಸ್ವಾಮಿಗಳು ಅನುಭಾವಿಗಳು, ಅನುಭಾವಿ ಕವಿಗಳು, ತತ್ವಜ್ಞಾನಿಗಳೂ ಆಗಿದ್ದರು. ಅವರ ಪಾಂಡಿತ್ಯ ಆಧ್ಯಾತ್ಮಿಕ ಸಾಧನೆಗಳು ಹಲವಾರು ದಾಖಲೆಗಳನ್ನು ನಿರ್ಮಿಸಲು ಕಾರಣ ಆಗಿವೆ. ೧೯೫೮ರಲ್ಲಿ ಜರುಗಿದ ಯೋಗ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಅದು ಅಂತರಾಷ್ಟ್ರೀಯ ಯೋಗ ಸಮ್ಮೇಳನ ಫ್ರಾನ್ಸ್ ದೇಶದ ಗ್ರಿನೋಬಲ್‌ದಲ್ಲಿ ಜರುಗಿತು. ಸ್ವಾಮಿ ವಿವೇಕಾನಂದರು ವಿಶ್ವಧರ್ಮ ಸಮ್ಮೇಳನದಲ್ಲಿ ಅತಿಥಿಯಾಗಿ ಭಾರತ ಯೋಗ ಮತ್ತು ತತ್ವಶಾಸ್ತ್ರದೆಡೆ ಜಗತ್ತಿನ ಗಮನ ಸೆಳೆಯುವಂತೆ ಮಾಡಿದ್ದರು. ಆದರೆ ಕುಮಾರಸ್ವಾಮಿಗಳು ಯೋಗ ಸಮ್ಮೇಳನದ ಅಧ್ಯಕ್ಷರಾಗಿ ಲಿಂಗಾಯತ ತತ್ವಶಾಸ್ತ್ರವನ್ನು ಜಗತ್ತಿಗೆ ಪರಿಚಯಿಸಿಕೊಟ್ಟರು. ಸ್ವಾಮಿ ವಿವೇಕಾನಂದರು ಹಿಂದೂ ಧರ್ಮದ ಪ್ರತಿನಿಧಿಯಾಗಿ ಹೋಗಿದ್ದರೆ ಕುಮಾರ ಸ್ವಾಮಿಗಳು ಲಿಂಗಾಯತ ಧರ್ಮದ ಪ್ರತಿನಿಧಿಯಾಗಿ ಹೋಗಿದ್ದು ವಿಶೇಷವೆನಿಸಿದೆ. ಲಿಂಗಾಯತ ಧರ್ಮದ ಪ್ರತಿನಿಧಿಯೊಬ್ಬರು ಅಂತಾರಾಷ್ಟ್ರೀಯ ಯೋಗ ಸಮ್ಮೇಳನದ ಅಧ್ಯಕ್ಷರಾಗಿ ಕರ್ನಾಟಕ ಮತ್ತು ದೇಶದ ಕೆಲವೇ ರಾಜ್ಯಗಳಲ್ಲಿ ಚಿರಪರಿಚಿತವಾದ ಲಿಂಗಾಯತ ತತ್ವ ಆದರ್ಶಗಳನ್ನು ಜಗತ್ತಿಗೆ ಪರಿಚಯಿಸಿಕೊಟ್ಟಿರುವುದು ಹೆಮ್ಮೆಯ ಸಂಗತಿಯಾಗಿದೆ. ಮಹಾತ್ಮ ಬಸವೇಶ್ವರರನ್ನು, ಶರಣರನ್ನು ಜಗತ್ತಿಗೆ ಪರಿಚಯಿಸಿಕೊಟ್ಟವರಲ್ಲಿ ಇವರೇ ಮೊದಲಿಗ ರಾಗಿದ್ದಾರೆ. ಅದೂ ಅಲ್ಲದೆ ಫ್ರಾನ್ಸ್ ದೇಶದಲ್ಲಿ ಮೊಟ್ಟ ಮೊದಲು ಬಸವೇಶ್ವರರ ಜಯಂತಿಯನ್ನು ಆಚರಿಸಿದರು ಕುಮಾರಸ್ವಾಮಿಗಳು!.

ಶ್ರೀ ವಿನೋಬಾ ಭಾವೆಯವರು ಕರ್ನಾಟಕದ ಯಮಕನಮರಡಿ ಗ್ರಾಮಕ್ಕೆ ಭೇಟಿಕೊಟ್ಟಾಗ ಕುಮಾರಸ್ವಾಮಿಗಳಿಗೆ ಅವರನ್ನು ಸಂದರ್ಶಿಸುವ ಅವಕಾಶ ದೊರಕಿತ್ತು. 'ಬಸವಣ್ಣನವರ ವಚನಗಳಲ್ಲಿ ಸರ್ವೋದಯ ಪದವು ದೊರಕುವುದೇ? ಎಂದು ವಿನೋಬಾ ಭಾವೆಯವರು ಕೇಳಿದ್ದರು. ಆಗ ಸ್ವಾಮಿಗಳು ಬಸವೇಶ್ವರರ ವಚನಗಳಲ್ಲಿ ಸರ್ವೋದಯ ಪದ ಇಲ್ಲವಾದರೂ ಸರ್ವೋದಯಕ್ಕೆ ಅಸ್ತಿಭಾರ ಹಾಕಿದವರು ಬಸವಣ್ಣನವರು! ಎಂದು ಸವಿಸ್ತಾರವಾಗಿ ಬಸವಣ್ಣನವರ ಸರ್ವೋದಯ ಸಮಾಜದ ಪರಿಕಲ್ಪನೆಯನ್ನು ಪರಿಚಯಿಸಿಕೊಟ್ಟಿದ್ದರು. ವ್ಯಾಟಿಕನ್ ಅರಮನೆಯ ಕ್ರಿಶ್ಚಿಯನ್ ಧರ್ಮಗುರು ಪೋಪ್ ಜಾನ್‌ಪಾಲ್ ಅವರಿಂದ ಕುಮಾರಸ್ವಾಮಿಗಳಿಗೆ ಆಮಂತ್ರಣ ದೊರಕಿತ್ತು. ಅವರ ಭೆಟ್ಟಿಯ ಸ್ಮರಣೆಗಾಗಿ ಸ್ವಾಮಿಗಳು ಇಷ್ಟಲಿಂಗವನ್ನು ಕೊಟ್ಟು ಇಷ್ಟಲಿಂಗದ ಮಹತ್ವವನ್ನು ಪರಿಚಯಿಸಿಕೊಟ್ಟಿದ್ದಾರೆ.

'ಹೇ ಪ್ರಭೋ ಪ್ರಸೀದ ಓಂ' ಸಪ್ತಾಕ್ಷರಿಮಂತ್ರ ಸೃಷ್ಟಿ ಮಾಡಿ ಪ್ರಾರ್ಥನಾ ಯೋಗವನ್ನು ಪ್ರಚಾರದಲ್ಲಿ ತಂದಿದ್ದಾರೆ. ಪ್ರಾರ್ಥನಾಯೋಗಕ್ಕೂ ಇನ್ನುಳಿದ ಯೋಗಕ್ಕೂ ಅಂತರವಿದೆ. ಪ್ರಾರ್ಥನಾ ಯೋಗದಲ್ಲಿ ನಾವು ಪ್ರಭುಶಕ್ತಿಯನ್ನು ಆಹ್ವಾನಿಸಿ ಅದು ನಮ್ಮ ಜೀವನದಲ್ಲಿ ಇಳಿದುಬಂದು ಒಳಿತಾಗಲೆಂದು ಬಯಸುತ್ತೇವೆ. ಉಳಿದ ಯೋಗಗಳಲ್ಲಿ ಪ್ರತ್ಯೇಕ ವ್ಯಕ್ತಿಯು ತನ್ನ ಕೆಲವು ವೈಯಕ್ತಿಕ ಅಂತಃಶಕ್ತಿಯನ್ನು ಜಾಗ್ರತಮಾಡಿ ಕೊಂಡು ಆ ಶಕ್ತಿಗಳ ಮೂಲಕ ಅನೇಕ ಪವಾಡಗಳನ್ನು ಎಸಗುತ್ತಾನೆ. ಆದ್ದರಿಂದ ಪ್ರಭುವಿನಲ್ಲಿ ಬೇಡಿರಿ. ಅವನ ಅಪಾರ ಶಕ್ತಿಯು ಇಳಿದುಬಂದು ನಮಗೆ ಏನು ಬೇಕಾದುದನ್ನು ಮಾಡುವದು' ಎಂದು ಪ್ರಾರ್ಥನಾ ಯೋಗದ ಮಹತ್ವವನ್ನು ಪ್ರತಿಪಾದಿಸಿದರು.

೧೯೫೩ರಲ್ಲಿ ಹೃಷಿಕೇಶದಲ್ಲಿ ಜರುಗಿದ ಜಾಗತಿಕ ಸರ್ವಧರ್ಮ ಸಮ್ಮೇಳನದಲ್ಲಿ ಬಹುಸಂಖ್ಯಾತ ಧರ್ಮದ ಮುಖಂಡರಿಗೆ ಮಾತ್ರ ಅಧ್ಯಕ್ಷಸ್ಥಾನವನ್ನು ಕೊಡಲಾಗುತ್ತಿತಂತೆ. ಅದರಲ್ಲಿ ತಮ್ಮ ತಮ್ಮ ಧರ್ಮ ಕುರಿತು ಕೇವಲ ಐದು ನಿಮಿಷ ಮಾತ್ರ ಮಾಡನಾಡಲು ಅವಕಾಶವಿತ್ತು. ಹೀಗಿರುವಾಗ ಲಿಂಗಾಯತ ಧರ್ಮದ ಪ್ರತಿನಿಧಿಯಾಗಿ ಹೋದ ಸ್ವಾಮಿಗಳು ಶಿವಯೋಗದಿಂದ ವ್ಯೋಮಕಾಯ ಸಿದ್ಧಿ ದೊರಕುವ ವಿಚಾರವನ್ನು ತಿಳಿಸುತ್ತ ಭಕ್ತಿಯೋಗ, ರಾಜಯೋಗ ಮತ್ತು ಕ್ರಿಯಾಯೋಗಗಳ ಸಮನ್ವಯ ಶಿವಯೋಗದಿಂದ ಸಾಧ್ಯವಿದೆ ಎಂದು ತಿಳಿಸುತ್ತ ಅಲ್ಲಮ ಪ್ರಭು-ಗೋರಖನಾಥರ ಸಂವಾದವನ್ನು ಪ್ರಭಾವಶಾಲಿಯಾದ ಶೈಲಿಯಲ್ಲಿ ಪರಿಚಯಿಸಿಕೊಟ್ಟಂತೆ ಅದನ್ನು ಕೇಳಿದ ಧರ್ಮದ ಪ್ರತಿನಿಧಿಗಳು ಕುಮಾರಸ್ವಾಮಿಗಳ ಪಾಂಡಿತ್ಯವನ್ನು ಶಿವಯೋಗದ ಮಹತ್ವವನ್ನು ಅರಿತು ಎರಡನೇ ದಿವಸ ಇವರನ್ನೇ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿದ್ದರು. ಲಿಂಗಾಯತ ಧರ್ಮದ ಪ್ರತಿನಿಧಿಯಾದ ಸ್ವಾಮಿಗಳಿಗೆ ಅಧ್ಯಕ್ಷಸ್ಥಾನ ದೊರಕಿದ್ದು ಮತ್ತು ಜಾಗತಿಕ ಧರ್ಮ ಸಮ್ಮೇಳನದಲ್ಲಿ ಅವರು ಲಿಂಗಾಯತ ಧರ್ಮವನ್ನು ಪರಿಚಯಿಸಿಕೊಟ್ಟದ್ದು ಹೆಮ್ಮೆಯ ಸಂಗತಿಯಾಗಿದೆ.

ಸ್ವರ್ಗ-ನರಕಗಳು ಎರಡು ಅವಸ್ಥೆಗಳು. ಆಚಾರ-ವಿಚಾರ, ಕ್ರಿಯಾಜ್ಞಾನ, ಪ್ರೇಮಪ್ರಭೆ ಮತ್ತು ಜೀವನಧರ್ಮ ಇವುಗಳ ಹೊಂದಾಣಿಕೆ ಇರುವುದೆಲ್ಲ ಸ್ವರ್ಗ, ಇವುಗಳಿಲ್ಲದುದು ನರಕವಾಗುತ್ತದೆ ಎಂದು ಸ್ವರ್ಗ ನರಕಗಳ ಕುರಿತು ಹೇಳಿದ್ದಾರೆ. ಅವರ ವಾಕ್‌ಸಿದ್ಧಿ ಹಾಗೂ ಪ್ರವಚನ ಕಲೆಯನ್ನು ಮೆಚ್ಚಿ ಅವರನ್ನು 'ಎರಡನೆ ವಿವೇಕಾನಂದ' ಎಂದು ವಿದ್ವಾಂಸರು ಪ್ರಶಂಸೆ ಮಾಡಿದ್ದಾರೆ. ಕರ್ನಾಟಕ-ಮಹಾರಾಷ್ಟ್ರ ರಾಜ್ಯಗಳಲ್ಲಿ ಅಪಾರಸಂಖ್ಯೆಯ ಭಕ್ತರಿದ್ದಾರೆ. ದೇಶ-ವಿದೇಶ ಗಳಲ್ಲೂ ಸ್ವಾಮಿಗಳ ಶಿಷ್ಯರಿದ್ದಾರೆ. ಕ್ರಿಯೇಶಿಯಾದಲ್ಲಿ ಕುಮಾರಸ್ವಾಮಿಗಳ ಹೆಸರಿನಲ್ಲಿ ಅವರ ಶಿಷ್ಯರು ಶಿವಯೋಗ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದ್ದಾರೆ. ಮಾತಿನಲ್ಲಿ ಸದುವಿನಯ ಕೃತಿಯಲ್ಲಿ ಸದಾಚಾರ, ನುಡಿಯಂತೆ ನಡೆ ಮತ್ತು ಯೋಗದಲ್ಲಿ ಪರಿಣಿತಿ ಹೊಂದಿರುವ ಅವರ ವ್ಯಕ್ತಿತ್ವವನ್ನು ದೈವತ್ವಕ್ಕೇರಿಸಲು ಕಾರಣೀಭೂತ ಎನಿಸಿದೆ. ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ಅವರು ಹಲವಾರು ಪಾಂಡಿತ್ಯಪೂರ್ಣಗಳನ್ನು ಗ್ರಂಥಗಳನ್ನು ರಚಿಸಿದ್ದಾರೆ. 'ಮಿರರ್ ಆಫ್ ವೀರಶೈವ ವಿಜಮ್' ಹಾಗೂ 'ವೀರಶೈವ ಫಿಲಾಸಫಿ ಆ್ಯಂಡ್ ಮೈಸ್ಟಿಸಿಜಮ್' ಎಂಬ ಗ್ರಂಥಗಳು ಅಮೇರಿಕಾದ ವಿಶ್ವವಿದ್ಯಾಲಯಗಳಲ್ಲಿ ಪಠ್ಯಪುಸ್ತಕಗಳಾಗಿವೆ. 'ಅಂಟುದಿ ಫಸ್ಟ್' ಎಂಬ ಗ್ರಂಥವು ಪಾಶ್ಚಿಮಾತ್ಯ ಗ್ರಂಥಗಳಲ್ಲಿ ಮಹತ್ವದೆಂದು ಪರಿಗಣಿಸಲ್ಪಟ್ಟಿದೆ. ಅಲ್ಲದೆ ಪ್ರಶಸ್ತಿಗೂ ಪಾತ್ರ ವಾಗಿದೆ. ಅವರು ಬರೆದ ಕನ್ನಡ ಗ್ರಂಥಗಳಾದ ಮೀನ್‌ಕಣ್, ಮುಂಕಣ್, ಕಾಲಪ್ರವಾಹ, ಪಲ್ಲಟ ಮೊದಲಾದವುಗಳ ಆಯ್ದ ಭಾಗಗಳು ಕನ್ನಡ ಪಠ್ಯವಿಷಯಗಳಲ್ಲಿ ಸೇರ್ಪಡೆಯಾಗಿವೆ.

ಎಂಬತ್ತಾರು ವರ್ಷಗಳ ತನಕ ಅವರು ಪ್ರವಚನ ಮಾಡುತ್ತ, ಅನುಷ್ಠಾನ ಮಾಡುತ್ತ ತಪಸ್ವಿಗಳೆನಿಸಿದ್ದರು. ಅವರು ಸಂಸ್ಕೃತದಲ್ಲಿ ನೀಡಿದ ಸಂದೇಶವೊಂದು ಹೀಗಿದೆ. 'ಆಲಯಂ ಲೋಕವಖಿಲಂ ಮೂರ್ತಿಃ ಸರ್ವಾತ್ಮ ಸಂಕುಲಂ'-

-ನಿಷ್ಕಾಮ ಸೇವಾಹಿ ಸತ್ಪೂಜಾ ಮುಕ್ತಿಃ ಸರ್ವಾತ್ಮ ಮಂಗಲಂ' ಎಲ್ಲ ಲೋಕಗಳೇ ಆಲಯ. ಸರ್ವರಲ್ಲಿರುವ ಆತ್ಮಗಳೇ ಮೂರ್ತಿ. ನಿಷ್ಕಾಮ ಸೇವೆಯೇ ಒಳ್ಳೆಯ ಪೂಜೆ. ಸರ್ವ ಆತ್ಮಗಳಿಗೆ ಮಂಗಲ ಮಾಡುವುದೇ ಮುಕ್ತಿ ಎಂದಾಗಿದೆ. ಕುಮಾರಸ್ವಾಮಿಗಳು ನವಕಲ್ಯಾಣದ ಮೂಲಕ ಶರಣರ ತತ್ವಗಳನ್ನು ಜನರಿಗೆ ಪರಿಚಯಿಸಿಕೊಡುವುದರ ಜೊತೆಗೆ ಆಚರಣೆಯಲ್ಲಿ ತರಲು ಪ್ರೇರಣೆ ನೀಡಿದ್ದು ಗಮನಾರ್ಹ ಸಂಗತಿಯಾಗಿದೆ. ಆದರೆ ಈ ಸಂಗತಿ ಹುಟ್ಟಿನಿಂದ ಜಂಗಮರಾದವರಿಗೆ ಅಸಹನೀಯ ಎನಿಸಿದ್ದು ಸರಿಯಲ್ಲ. ಆಚರಣೆಯಿಂದ ಜಂಗಮರಾಗಲು, ಗುರು ಆಗಲು ಸಾಧ್ಯವಿದೆ ಎಂದು ಶರಣರು ಸಾರಿದ್ದನ್ನು ಮರೆಮಾಚುವ ಜಾತಿ ಜಂಗಮರ ನಡತೆ ಪ್ರಶ್ನಾರ್ಹವೇ ಆಗಿದೆ.

ತಪೋವನದ ಹೂವಿನ, ಹಣ್ಣಿನ ಗಿಡಗಳಂತೆ ಶ್ರೀಕುಮಾರಸ್ವಾಮಿಗಳ ಯೋಗ ಸಾಧನೆ ಸದಾ ಹಸಿರಾಗಿದೆ. ಅವರ ಭೌತಿಕವಾಗಿ ಇಂದಿಲ್ಲವಾದರೂ ಆಧ್ಯಾತ್ಮಿಕವಾಗಿ ತಪೋವನದಲ್ಲಿ ಅವ್ಯಕ್ತವಾಗಿ ನೆಲೆಸಿದ್ದಾರೆ.

*

# ಗುರುಬಸವಣ್ಣನವರ ಲಿಂಗೈಕ್ಯ ಸಂಸ್ಮರಣಾ ದಿನ

– ಯೋಗೀಶ್ ನಿರ್ವಿಕಲ್ಪ, ಬಿನ್ ಎಸ್. ವಾಸುದೇವ್, ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ– 577 202.

ಆಗಸ್ಟ್ ೧೮, ಗುರು ಬಸವಣ್ಣನವರು ಈ ಇಳೆಯ ಸಾರ್ಥಕಪೂರ್ಣ ಬಾಳ್ವೆಯನ್ನು ಪೂರೈಸಿ ಪರಮಾತ್ಮನ ಪರಮಚಿದ್ಬೆಳಕಿನಲ್ಲಿ ಐಕ್ಯಗೊಂಡ ದಿನ. ಈ ದಿನವನ್ನು ಬಸವ ಲಿಂಗೈಕ್ಯ ಸಂಸ್ಮರಣಾ (ಬಸವ ಪಂಚಮಿ) ದಿನವನ್ನಾಗಿ ರಾಷ್ಟ್ರಾದ್ಯಂತ ಆಚರಿಸಲಾಗುತ್ತಿದೆ. ಈ ನಿಮಿತ್ತ ವಿಶೇಷ ಲೇಖನ:

*ನಾನಾ ಭವದುಃಖದಲ್ಲಿ ಹುಟ್ಟಿದ ಪ್ರಾಣಿಯಲ್ಲ*
*ನಾನು ತಂದೆ.*
*ಇನ್ನು ಹುಟ್ಟಲಾರೆನು ಹೊಂದಲಾರೆನು.*
*ಜನನ ಮರಣವೆಂಬೆರಡಕ್ಕೆ ಹೊರಗಾದೆನಯ್ಯಾ.*
*ನೀವು ಹೇಳಿದ ಮಣಿಹವ ಪೂರೈಸಿದೆ.*
*ಇನ್ನು ಕೂಡಿಕೊಳ್ಳಾ, ಕೂಡಲಸಂಗಮದೇವಾ !*

ಸಕಲ ಜೀವಾತ್ಮರಿಗೂ ಲೇಸು ಬಯಸಿದ ಮಹಾ ಮಾನವತಾವಾದಿ ಗುರು ಬಸವಣ್ಣನವರು ಈ ಮರ್ತ್ಯದ ಸಾರ್ಥಕ ಬಾಳ್ವೆಯನ್ನು ಪೂರೈಸಿ, ಇಷ್ಟಲಿಂಗ ಯೋಗ ಧ್ಯಾನದ ಮೂಲಕ ಜಗತ್ಕರ್ತ ಪರಮಾತ್ಮನ ಪರಮ ಚಿದ್ಬೆಳಗಿನಲ್ಲಿ ಸಮರಸಗೊಂಡ ಸಂದರ್ಭದಲ್ಲಿ ಅಭಿವ್ಯಕ್ತ ಗೊಳಿಸಿದ ವಚನ ಸಂದೇಶ ಇದಾಗಿದೆ.

ಜಗತ್ತಿನ ಶ್ರೇಷ್ಠ ಸಮಾಜ ಸುಧಾರಕರಾದ ಗುರು ಬಸವಣ್ಣನವರು ಸರ್ವ ಸಮಾನತೆಯ ಪ್ರತಿಪಾದಕರು. ಅವರು ಕಲ್ಯಾಣದಲ್ಲಿ ಆದರ್ಶಪೂರ್ಣ ಕಲ್ಯಾಣ ಸಾಮ್ರಾಜ್ಯ ವನ್ನು ಕ್ರಿಯಾತ್ಮಕವಾಗಿ ರೂಪಿಸಿದವರು. ಅವರ ವೈಚಾರಿಕ ಚಿಂತನೆಯ ಪ್ರತೀಕವಾದ 'ಅನುಭವ ಮಂಟಪ'ದ ಮೂಲಕ ಎಲ್ಲಾ ಶೋಷಿತ ವರ್ಗದವರೂ ಸಹ ಸಮಾಜದ ಮುಖ್ಯ ವಾಹಿನಿಯೊಳಗೆ ಪ್ರವೇಶಿಸುವಂತಾಯಿತು. ಭಗವಂತನ ಸಕ್ಷಾತ್ಕಾರದ ದರ್ಶನ ಶಾಸ್ತ್ರವನ್ನು ಜಗತ್ತಿಗೆ ನೀಡಿದ ಬಸವಣ್ಣನವರು ಶ್ರೇಷ್ಠ ತತ್ತ್ವಜ್ಞಾನಿ ಹಾಗೂ ಆಧ್ಯಾತ್ಮಿಕ ಅನುಭವಿಗಳಾಗಿದ್ದವರು. ಹುಟ್ಟು–ಸಾವುಗಳ ನಡುವಿನ ಬದುಕಿನ ಕಾಲಾವಧಿಯಲ್ಲಿ ನಾವುಗಳು ಆಧ್ಯಾತ್ಮಿಕ ಔನ್ನತ್ಯಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಬೇಕೆಂದು ತಿಳಿಸಿದ ಗುರು ಬಸವಣ್ಣನವರು ಆಧ್ಯಾತ್ಮಿಕ ವಿಚಾರಗಳತ್ತ ಹೆಚ್ಚಿನ ಒಲವು ಬೆಳೆಸಿಕೊಳ್ಳುವುದರ ಮೂಲಕ ಚಿತ್ತ ಶುದ್ಧಿ ಮಾಡಿಕೊಂಡು ಪರಮಾತ್ಮನ ಸಾನ್ನಿಧ್ಯ ಸಾಧಿಸುವ ದಿಕ್ಕಿನಲ್ಲಿ ಸಾಗುವುದು ಜೀವನದ ಪರಮ ಧ್ಯೇಯವಾಗಬೇಕೆಂದು ಬಯಸಿದವರು.

ಅಂದು ಕಲ್ಯಾಣ ರಾಜ್ಯದ ಪ್ರಧಾನಿಯಾಗಿದ್ದ ಗುರು ಬಸವಣ್ಣನವರು ಪ್ರತಿಲೋಮ ವಿವಾಹ ಜರುಗಿಸಿದ ಕಾರಣಕ್ಕೆ ಬಿಜ್ಜಳ ಅರಸನಿಂದ ಗಡೀಪಾರು ಶಿಕ್ಷೆ ಪಡೆದು, ಅತ್ತ ಕಲ್ಯಾಣದಿಂದ ಕೂಡಲಸಂಗಮಕ್ಕೆ ಆಗಮಿಸಿದ ಅವರು ಇಷ್ಟಲಿಂಗ ಯೋಗ ಧ್ಯಾನದ ಅನುಷ್ಠಾನದಲ್ಲಿ ತತ್ಪರತೆಯ ಉತ್ತುಂಗ ಶಿಖರವನ್ನು ಮುಟ್ಟಿದವರು.

*ಅನ್ಯ ವಿಚಾರವ ಮರೆತು ನಿಮ್ಮ ವಿಚಾರವೆಡೆ*
*ಗೊಂಡಿತ್ತಾಗಿ*
*ಪ್ರಾಣನ ನೆಲೆಗಟ್ಟಿತ್ತಯ್ಯಾ*
*ದಶವಾಯುಗಳ ಸಂಚ ತಪ್ಪಿತ್ತಯ್ಯಾ*
*ಕರಣಂಗಳ ಕರತಳಾಮಳಕಗೊಂಡೆನಯ್ಯಾ;*
*ಹೊರಗೆ ಅದೆಂತೆಂದರಿಯದೆ ನೀನೇ ಗತಿಯಾಗಿದ್ದೆ*
*ಕೂಡಲಸಂಗಮದೇವಾ !*

ಪರಮಾತ್ಮನು ಜೀವಾತ್ಮನನ್ನು ಪ್ರಕೃತಿಯ ಒಂದು ವಿಶಿಷ್ಟ ಸೂತ್ರದಲ್ಲಿ ಬಂಧಿಸಲ್ಪಟ್ಟಿರುತ್ತಾನೆ. ಮತ್ತೊಂದು ಸೂತ್ರದ ಅನ್ವಯ ಆ ಬಂಧನದಿಂದ ಜೀವಾತ್ಮ ಮುಕ್ತನಾಗಲು ಅವಕಾಶ ಉಂಟು. ಜೀವಾತ್ಮ ಇಷ್ಟಲಿಂಗ ಯೋಗ ಧ್ಯಾನದ ಸೂತ್ರವ ಅರಿತು ಪ್ರಯತ್ನ ಶೀಲವಾದರೆ ಜೀವಾತ್ಮ ದಶವಾಯುಗಳ ಕಾಯಮನದ ಜೀವಗುಣದಿಂದ ಹೊರ ಬರಬಹುದೆಂಬುದು ಗುರು ಬಸವಣ್ಣನವರ ಸಂದೇಶವಾಗಿದೆ.

ಮನಸ್ಸು ವಿಷಯ ಪ್ರಪಂಚದ ವೃತ್ತಿಗಳಿಂದ ಮುಕ್ತ ಗೊಂಡ ಸಂಪೂರ್ಣ ಸೃಷ್ಟಿಗೆ ಆಧಾರವಾಗಿರುವ ಪರಮ ಚಿದ್ಬೆಳಗಿನೊಳಗೆ ಸಮರಸವಾಗಬೇಕೆಂದು ತಿಳಿಸುವ ಗುರು ಬಸವಣ್ಣನವರು ಯಾವಾಗ ತನುಮನಗಳೆಲ್ಲವೂ ಅರಿವು ಮಯಗೊಳ್ಳುವುದೂ ಅದೇ ಜೀವನ್ಮುಕ್ತಿಯ ಸ್ಥಿತಿ ಎನ್ನುತ್ತಾರೆ.

ಕಾಯ ಜೀವದ ಭ್ರಾಂತುಸೂಚಕ ಹಿಂಗಿ ನಿಶ್ಯಂಕನಾಗಿ ಆತ್ಮಸಂಗವಾದವರಿಗೆ ಬಹಿರ್ಭಾವವಿರುವುದಿಲ್ಲ. ಆಗ ಸಾಧಕ ತನುಮನದಲ್ಲಿದ್ದರೂ ಅವುಗಳ ಪರಿಣಾಮಕ್ಕೆ ಅತೀತ ನಾಗಿರುತ್ತಾನೆ. ಯಾವ ಕ್ಷಣದಲ್ಲಾದರೂ ಈ ಕಾಯ ಜೀವ ಬಂಧನದಿಂದ ಮುಕ್ತನಾಗುವ ಸದಿಚ್ಛೆ ಆತನ ಬಳಿಯೇ ಇರುತ್ತದೆ ಎಂಬ ಅಭಿಪ್ರಾಯ ಗುರು ಬಸವಣ್ಣನವರು ನೀಡಿದ ಇಷ್ಟಲಿಂಗ ಯೋಗ ಸೂತ್ರದಲ್ಲಿ ಅಡಕವಾಗಿದೆ.

*ನಿರಹಂಭಾವದೊಳಗೆ ದಾಸೋಹದ*
*ನಿರಹಂಕೃತಿ ನಿಷ್ಪತ್ತಿಯಾಗಿ*
*ಎರಡರಿಯದೆ ನಿಜ ಪರಮಾನಂದದೊಳಿಪ್ಪೆನು,*
*ಕೂಡಲಸಂಗಮದೇವಾ!*





ಜೀವಾತ್ಮನನ್ನು ಕಾಯಜೀವ ಭಾವದ ಸಂಬಂಧದಿಂದ ಬೇರ್ಪಡಿಸಿ ಮಾಡಿದಂತಹ ದಾಸೋಹದ ನಿರಹಂಕೃತಿ (ಜೀವ ಗುಣವಿಲ್ಲದ ಕರ್ಮ)ಯು ನಿಷ್ಪತ್ತಿಯಾದಂತೆ ಅರ್ಥಾತ್ ಕಾಯಜೀವ ಭಾವಗಳೆಲ್ಲವೂ ಯಾವ ಮೂಲ ಆಧಾರದಿಂದ ಸ್ಫುರಣಗೊಳ್ಳುತ್ತಿದೆಯೋ ಆ ಪರಮಸತ್ಯದ ಚಿದ್ಬೆಳಕಿನಲ್ಲಿ ಎಲ್ಲಾ ಭಾವನೆಗಳನ್ನು ಸಮೀಕರಿಸಿದಾಗ ಆಗ ಎರಡರಿಯದ ನಿಜ ಪರಮಾನಂದದ ಬೆಳಕಿನಲ್ಲಿ ವಿಹರಿಸಬಹುದು ಎಂಬ ನಿಲುವು ಗುರು ಬಸವಣ್ಣನವರದ್ದು. ಈ ಸ್ಥಿತಿಯನ್ನು ಯೌಗಿಕ ಭಾಷೆಯಲ್ಲಿ 'ಐಕ್ಯಸ್ಥಿತಿ' ಎಂದು ಕರೆಯುತ್ತಾರೆ. ಅಂತಹ ಮಹತ್ವಪೂರ್ಣ ಯೌಗಿಕ ನಿಲುವಿನಲ್ಲಿ ವಿಹರಿಸಿದ್ದ ಗುರು ಬಸವಣ್ಣನವರು ಪಶ್ಚಿಮ ಪದ್ಮಾಸನದಲ್ಲಿ ಕುಳಿತು ಬ್ರಹ್ಮರಂಧ್ರ ದಲ್ಲಿ ಪ್ರಾಣಶಕ್ತಿಯನ್ನು ಷಟ್‌ಶಕ್ತಿಗಳ ಮೂಲಕ ಕೇಂದ್ರೀಕರಿಸಿ ದವರು. ಬೆಳಗು ಬೆಳಗ ಕೂಡಿದ ಕೂಟದಲ್ಲಿ ನೆಲೆನಿಂತು, ಈ ಮರ್ತ್ಯದ ಸಾರ್ಥಕ ಬಾಳ್ವೆಯನ್ನು ಪೂರೈಸಿದವರು.

ಗುರು ಬಸವಣ್ಣನವರು ಪರಮಾತ್ಮನ ಮಹಾ ಬೆಳಗಿ ನೊಳಗೆ ಬೆಳಕಾಗಿ ಸಮರಸಗೊಂಡ ಶ್ರಾವಣ ಶುದ್ಧ ಪಂಚಮಿಯ ದಿನವನ್ನು ನೂರಾರು ವರ್ಷಗಳಿಂದಲೂ ಜನತೆ ಬಸವ ಪಂಚಮಿ(ಬಸವ ಲಿಂಗೈಕ್ಯ ಸಂಸ್ಮರಣಾ ದಿನ) ಯನ್ನಾಗಿ ಆಚರಿಸಿಕೊಂಡು ಬರುತ್ತಿದೆ. ೧೨ನೇ ಶತಮಾನದ ಶರಣಪರಂಪರೆ ಗುರುಬಸವಣ್ಣನವರು ಪರಮಾತ್ಮನ ವಿಶೇಷ ಮಣಿಹದ ಆದೇಶ ಹೊತ್ತು ಜಗತ್ತಿಗೆ ಅವತರಿಸಿದನೆಂದು ನುಡಿದಿದೆ. ಬಸವಣ್ಣನವರನ್ನು ಭವನದ ಬೆಳಕು, ದೇವಕಂದನೆಂದೂ ಸ್ತುತಿಸಿದೆ. ಗುರು ಬಸವಣ್ಣ ನವರ ಅವಿರತ ಕಾರ್ಯಕ್ಷಮತೆ ಕಂಡಿದ್ದ ಶರಣ ನಿಜಗುರು ಶಂಕರದೇವರು 'ಹರನ ನಿರೂಪದಿಂದ ಧರೆಗೆ ಅವತರಿಸಿದ ಗುರು ಬಸವಣ್ಣನವರಿಂದ ಶಿವಾಚಾರ ಮತ್ತು ಸದಾಚಾರ ಧರೆಗೆ ವಿಖ್ಯಾತವಾಯಿತು' ಎಂದು ತಿಳಿಸುವುದರ ಮೂಲಕ ತಮ್ಮ ಭಕ್ತಿಪೂರ್ವಕ ನಮನಗಳನ್ನು ಸಲ್ಲಿಸಿದ್ದಾರೆ.

ತೆಲುಗಿನ ಪಾಲ್ಕುರಿಗೆ ಸೋಮಾರಾಧ್ಯನ ಬಸವಪುರಾಣ ವನ್ನು ಭಾಮಿನಿ ಷಟ್ಪದಿಯಲ್ಲಿ ಕನ್ನಡಿಸಿರುವ ಭೀಮಕವಿ ಬಸವಣ್ಣನವರನ್ನು ಕುರಿತು 'ನಿರಾಕಾರನಾದ ಪರಮಾತ್ಮನು ಗುರು ಬಸವಣ್ಣನವರೆಂಬ ಸಾಕಾರ ರೂಪದಲ್ಲಿ ಸಂಚರಿಸು ತ್ತಿಹರು' ಎಂದು ಭಕ್ತಿಪರವಶತೆಯಿಂದ ಜಪಿಸಿದ್ದಾರೆ. ವೈರಾಗ್ಯ ನಿಧಿ ಅಲ್ಲಮಪ್ರಭುಗಳ 'ಮರ್ತ್ಯಲೋಕದ ಮಹಾಮನೆ ಹಾಳಾಗಿ ಹೋಗಬಾರದೆಂದು ಕರ್ತ ಕಳುಹಿಸಿ ಕೊಟ್ಟ ಮಹಾನ್ ಶರಣ ಗುರು ಬಸವಣ್ಣನವರು' ಎಂದು ಭಕ್ತಿಭಾವದಿಂದ ಧ್ಯಾನಿಸಿದ್ದಾರೆ.

*ನೆನೆದಿಹೆನೆಂದಡೆ ಮನಕ್ಕೆ ನಿಲುಕದು*
*ಅರಿದಿಹೆನೆಂದಡೆ ಕುರುಹಿಂಗೆ ಬಾರದು*
*ಕಂಡಹೆನೆಂದಡೆ ಮೂರ್ತಿಯಲ್ಲ*
*ತನುವಿನೊಳಗಿಲ್ಲದ ಮನದೊಳಗಿಲ್ಲದ ಘನವು*
*ನಿನ್ನ ಮನಕ್ಕೆ ವೇದ್ಯವಾದ ಪರಿ ಎಂತಯ್ಯಾ*
*ಗುಹೇಶ್ವರನೆಂಬ ಲಿಂಗವು ಜಗದ ಕಣ್ಣಿಂಗೆ*
*ಕತ್ತಲೆಯ ಕವಿಸಿ, ತನ್ನ ತಪ್ಪಿಸಿಕೊಂಡಿಪ್ಪ*
*ಭೇದ ನಿನ್ನೊಳಡಗಿದ ಪರಿ ಎಂತು ಹೇಳಾ ಸಂಗನ*
*ಬಸವಣ್ಣಾ !*

ದೇಹ ಮನ ಇಂದ್ರಿಯಗಳಿಗೆ ಅತೀತವಾಗಿರುವ ಪರಮಾತ್ಮನ ಮಹಾಘನ ತತ್ತ್ವವು ಜಗದ ಕಣ್ಣಿಂಗೆ ಕತ್ತಲೆ ಯಾವರಿಸಿ, ತನ್ನ ಅಸ್ತಿತ್ವದ ಕುರುಹು ಸಿಗದಂತೆ ಅವ್ಯಕ್ತ ವಾದದ್ದು, ಅಂತಹ ಪರಮಾತ್ಮನು ಗುರು ಬಸವಣ್ಣನವರಿಗೆ ವೇದ್ಯವಾಗಿರುವ ಪರಿಕಂಡು ಶ್ರೀಮದ್ ಅಲ್ಲಮ ಪ್ರಭುಗಳು ವಿಸ್ಮಯ ಮತ್ತು ಅಚ್ಚರಿ ವ್ಯಕ್ತಪಡಿಸುವುದರ ಮೂಲಕ ಗುರು ಬಸವಣ್ಣನವರು ಪರಮಾತ್ಮನ ಸಾಕಾರ ರೂಪವೆಂದು ತಿಳಿಸಿದ್ದಾರೆ. ಪರಮಾತ್ಮ ಮತ್ತು ಗುರು ಬಸವಣ್ಣನವರಲ್ಲಿ ಯಾವುದೇ ಭಿನ್ನ–ಬೇಧವಿಲ್ಲ ಎನ್ನುವ ಪ್ರಭುದೇವರು ಗುರು ಬಸವಣ್ಣನವರಲ್ಲಿ ಪರಮಾತ್ಮನ ಪರಮ ಚಿದ್ಬೆಳಕನ್ನು ಕಂಡು ಸುಖಿಸಿದವರು.

*ಮಲ್ಲಿಗೆ ಇದ್ದಾಗ ಮುಳ್ಳೇಕೆ ಮುಡಿಯುತಿ*
*ಕಲ್ಯಾಣದಲ್ಲಿ ಬಸವಯ್ಯಾ ಇದ್ದಾಗ*
*ಕಲ್ಲೇಕಯ್ಯಾ ಮುಗಿಯುವೆ*

*ಬಸವ ಭಕ್ತಿಬೀಜ, ಬಸವ ಮುಕ್ತಿಯ ತೇಜ*
*ಬಸವ ಕಾಯಕದ ಗುರುಬೀಜ ! ಶಿವಮತಕ್ಕೆ*
*ಬಸವ ಓಂಕಾರ ಶಿವನಾಮ!*
*ಎಲ್ಲಾ ಬಲ್ಲಿದನಯ್ಯಾ ಕಲ್ಯಾಣ ಬಸವಯ್ಯಾ*
*ಚೆಲ್ಲಿದನು ತಂದು ಶಿವಬೆಳಕ ನಾಡೊಳಗೆ*
*ಸೊಲ್ಲೆತ್ತಿ ಜನವು ಹಾಡುವುದು.*

ಎಂದು ಜಾನಪದ ಕವಿವರ್ಯರು 'ದೇವಸ್ವರೂಪ ರಾದಂತಹ ಗುರು ಬಸವಣ್ಣನವರು ಈ ಮರ್ತ್ಯಲೋಕವನ್ನು ಪಾವನಗೊಳಿಸಿದರು' ಎಂದು ಹಾಡಿ ಧ್ಯಾನಿಸಿದ್ದಾರೆ.

ಗುರು ಬಸವಣ್ಣನವರು ಈ ಮರ್ತ್ಯದ ಸಾರ್ಥಕಪೂರ್ಣ ಬಾಳ್ವೆಯನ್ನು ಪೂರೈಸಿ, ಶ್ರಾವಣ ಶುದ್ಧ ದಿನದಂದು ಪರಮಾತ್ಮನ ಪರಮ ಚಿದ್ಬೆಳಕಿನಲ್ಲಿ ಲಿಂಗೈಕ್ಯಗೊಂಡ ಈ ಪರಮಪುಣ್ಯ ದಿನವನ್ನು ಗುರು ಬಸವಣ್ಣನವರ ಲಿಂಗೈಕ್ಯ (ಬಸವ ಪಂಚಮಿ)ದಿನವನ್ನಾಗಿ ಇಂದು ರಾಷ್ಟ್ರಾದ್ಯಂತ ಆಚರಿಸಲಾಗುತ್ತಿದೆ. ಈ ದಿನದಂದು ನಾವುಗಳು ಬಸವಣ್ಣ ನವರನ್ನು ಸಂಸ್ಮರಿಸುವುದರ ಮೂಲಕ ಅವರು ತೋರಿದ ಆದರ್ಶ ತತ್ವಮೌಲ್ಯದ ಪ್ರತಿನಿಧಿಗಳಾಗುವ ಸಂಕಲ್ಪ ಕೈಕೊಳ್ಳ ಬೇಕಾಗಿದೆ.

*

# ಶರಣರ ಸಂಗದಿಂದ ಅಮೆರಿಕದ ಅಹಂ ಅಳಿದು?!

-ಮನು ಬಳಿಗಾರ್

ವೀರಶೈವ ಸಮಾಜ ಆಫ್ ನಾರ್ತ್ ಅಮೆರಿಕ, 'ಅಕ್ಕ',ಕಾವೇರಿ ಕನ್ನಡ ಸಂಘ ಹಾಗೂ ಜೆ.ಎಸ್.ಎಸ್. ಸ್ಪಿರುಚುಯಲ್ ಸೆಂಟರ್ ವಾಷಿಂಗ್ಟನ್ ಮುಂತಾದ ಕನ್ನಡ ಸಂಘ ಸಂಸ್ಥೆಗಳು ಇತ್ತೀಚೆಗೆ ಅಮೆರಿಕಾದಲ್ಲಿ ಅಯೋಜಿಸಿದ್ದ ವೀರಶೈವ ರಾಷ್ಟ್ರೀಯ ಸಮ್ಮೇಳನದ ಪ್ರತ್ಯಕ್ಷ ವರದಿ.




ಹದಿನೈದು ದಿನಗಳ ಅಮೆರಿಕ ಪ್ರವಾಸ ಮುಗಿಸಿಕೊಂಡು ಮೊನ್ನೆ ತಾನೆ ಬೆಂಗಳೂರಿಗೆ ಬಂದಿಳಿದ್ದೇನೆ. ಎರಡು ವಾರಗಳ ಅವಧಿಯಲ್ಲಿ ಅಲ್ಲಿ ಮೂರು ಕಾರ್ಯಕ್ರಮಗಳು. ಮೊದಲನೆಯದು 'ಉತ್ತರ ಅಮೆರಿಕ ವೀರಶೈವ ರಾಷ್ಟ್ರೀಯ ಸಮ್ಮೇಳನ', ಎರಡನೆಯದು ಗುರುವಂದನೆ ಕಾರ್ಯಕ್ರಮ. ಮೊದಲನೆಯ ಹಾಗೂ ಎರಡನೆಯ ಸಮ್ಮೇಳನಗಳು ವಾಷಿಂಗ್ಟನ್ ಡಿ.ಸಿ.ಯ ಹೊರವಲಯದಲ್ಲಿ. ಸಂಯೋಜಕರು ವಿ.ಎಸ್.ಎನ್.ಎ (ವೀರಶೈವ ಸಮಾಜ ಆಫ್ ನಾರ್ತ್ ಅಮೆರಿಕ), ಅಕ್ಕ (ಅಮೇರಿಕ ಕನ್ನಡ ಕೂಟಗಳ ಆಗರ) ಸಂಘ ಸಂಸ್ಥೆಗಳು, ಇವೆಲ್ಲವುಗಳ ಸಂಘಟಕರೂ ಬಹುತೇಕ ಕನ್ನಡ ಹಾಗೂ ಕರ್ನಾಟಕದವರು. ಅವರ ಹುರುಪು, ಹುಮ್ಮಸ್ಸು ಶ್ರದ್ಧೆ, ಶ್ರಮ ಹೇಳತೀರದಷ್ಟು, ಎಲ್ಲದರಲ್ಲೂ ಶಿಸ್ತು, ಅಚ್ಚುಕಟ್ಟುತನ ಎದ್ದು ಕಾಣುವಂತಹುದು. ಮೊದಲ ಸಮ್ಮೇಳನ ಮೋಟಾರ್‌ಗಳ ಮಹಾನಗರ ಡೆಟ್ರಾಯ್ಟ್‌ನಲ್ಲಿ, ಫೋರ್ಡ್, ಜನರಲ್ ಮೋಟಾರ್ ಮುಂತಾದ ಬೃಹತ್ ಕಂಪನಿ ಕಾರುಗಳ ತವರುಮನೆಯಾದ ಇದು ಇನ್ನಿತರ ಮಹಾನಗರಗಳಂತೆಯೇ ಸುಂದರವಾದ ನಗರಿ. ಅಮೆರಿಕದ ಹಲವಾರು ರಾಷ್ಟ್ರಾಧ್ಯಕ್ಷರು ತಿರುಗಾಡಿದ, ಹತ್ತಿಳಿದ, ಹತ್ತಿ ಇಳಿಯದ (ಅಂದರೆ ಗುಂಡು ಹೊಡೆಸಿ ಕೊಂಡು ಹುತಾತ್ಮರಾದವರು) ಉಪಯೋಗಿಸಿದ ಭವ್ಯ ಕಾರುಗಳನ್ನು ಉತ್ಪಾದಿಸಿದ ಫೋರ್ಡ್ ಸಂಸ್ಥೆಯ ಫೋರ್ಡ್ ಮ್ಯೂಸಿಯಂ ಇರುವುದಿಲ್ಲಿಯೇ. ಅಂದಾಜು 1500 ವೀರಶೈವ ಕುಟುಂಬಗಳ ಸದಸ್ಯತ್ವ ಹೊಂದಿರುವ ವಿ.ಎಸ್.ಎನ್.ಎ. ಆಯೋಜಿಸಿದ ರಾಷ್ಟ್ರೀಯ ಸಮ್ಮೇಳನ ನಡೆದದ್ದೂ ಪ್ರತಿಷ್ಠಿತ ಫೋರ್ಡ್(ಸಾಂಸ್ಕೃತಿಕ ಕೇಂದ್ರ) ಕಲ್ಚರಲ್ ಸೆಂಟರ್‌ನಲ್ಲೇ. 650ಕ್ಕಿಂತಲೂ ಹೆಚ್ಚು ಪ್ರತಿನಿಧಿ ಗಳು ಭಾಗವಹಿಸಿದ್ದ ಈ ಸಮ್ಮೇಳನದ ಮುಖ್ಯ ಅತಿಥಿಗಳಾಗಿ ಕರ್ನಾಟಕದ ಶಿಕ್ಷಣ ಸಚಿವ ಬಸವರಾಜ ಹೊರಟ್ಟಿಯವರು ಭಾಗವಹಿಸಿದ್ದರೆ ನಾನು ಅತಿಥಿ ಭಾಷಣ ಕಾರನಾಗಿದ್ದೆ. ಉಳಿದಂತೆ ಅಲ್ಲಿಯ ಸಂಘಟಕರಾದ ದೊಡ್ಡಮನಿ, ತುಮಕೂರು ದಯಾನಂದ, ಪ್ರಭುಪಾಟೀಲ್, ಡಾ॥ ಹುಲಬನ್ನಿ, ಜಯಶ್ರೀ ಜಗದೀಶ್, ನಲವಡೆ ಮುಂತಾದವರೂ ಸಕ್ರಿಯವಾಗಿ ಪಾಲ್ಗೊಂಡಿದ್ದರು. ಈ ಸಾರಿಯ ಸಮ್ಮೇಳನದ ಧ್ಯೇಯೋದ್ದೇಶ 'ಕಾಯಕವೇ ಕೈಲಾಸ' ಎಂಬ ವಿಷಯವಾಗಿತ್ತು.

ಸಚಿವ ಹೊರಟ್ಟಿಯವರು ಉದ್ಘಾಟನಾ ಭಾಷಣ ಮಾಡುತ್ತ ವಚನಗಳಲ್ಲಿ ಜಾತ್ಯಾತೀತತೆ(ಸೆಕ್ಯುಲರಿಸಂ ಇನ್ ವಚನಾಸ್) ಎಂಬ ವಿಷಯದ ಮೇಲೆ ಬೆಳಕು ಚೆಲ್ಲಿದರು. ಇಂದಿನ ಜಗತ್ತಿನ ಜನಜೀವನದ ತಲ್ಲಣಕ್ಕೆ ಮನುಷ್ಯ ಮನುಷ್ಯನ ನಡುವಿನ ಭೇದಭಾವ, ರಾಷ್ಟ್ರರಾಷ್ಟ್ರಗಳ ನಡುವಿನ ಅಸಮಾನತೆಗಳೇ ಮುಖ್ಯ ಕಾರಣ. ಭಯೋತ್ಪಾದನೆ ಹಾಗೂ ಮತೀಯ ಮೂಲಭೂತವಾದಗಳು ಒಂದಲ್ಲ ಒಮ್ಮೆ ಇಡೀ ಮನುಕುಲವನ್ನೇ ನಾಶ ಮಾಡಬಲ್ಲವೆಂದು ತೀವ್ರ ಕಳವಳ ವ್ಯಕ್ತಪಡಿಸಿದರು. ಇಂತಹ ವೈಪರೀತ್ಯಗಳನ್ನು ತೊಡೆದುಹಾಕಲು ಸರ್ವ ಸಮಾನತೆಯ ತತ್ತ್ವಗಳನ್ನು ಬೋಧಿಸಿದ, ಜಾತಿ ವಿಷ ಬೇರುಗಳನ್ನು ಕಿತ್ತೊಗೆದ ವಚನಗಳ ಅಧ್ಯಯನ, ಮನನ ಹಾಗೂ ಪಾಲನೆ ಇಂದು ಎಂದಿಗಿಂತಲೂ ಹೆಚ್ಚು ಪ್ರಸ್ತುತವೆಂದರು. ಬಸವಣ್ಣ, ಅಕ್ಕಮಹಾದೇವಿ, ಅಲ್ಲಮ ಮುಂತಾದ ಶರಣರ ಹಲವಾರು ವಚನಗಳನ್ನು ಸೋದಾಹರಣವಾಗಿ ಉಲ್ಲೇಖಿಸಿದರು.





ಜಾತಿ, ಲಿಂಗ, ಉದ್ಯೋಗ ಮುಂತಾದುವುಗಳ ಮೇಲೆ ಮಾಡುವ ಭೇದಭಾವ ತೀರ ಖಂಡನಾರ್ಹ. ಇದರ ವಿರುದ್ಧ ಜಾತ್ಯಾತೀತ ಶಕ್ತಿಗಳು ಮುಂದಾಗಬೇಕು. ಅಂದಾಗಲೇ ಯು.ಎನ್.ಒ(ಸಂಯುಕ್ತ ರಾಷ್ಟ್ರ ಸಂಘ) ದಂತಹ ಸಂಸ್ಥೆಗಳ ಮುಖ್ಯೋದ್ದೇಶ, ಸಫಲವಾಗಲು ಸಾಧ್ಯ ಎಂದರು. 'ಉಚ್ಚ ಕುಲದಲಿ ಹುಟ್ಟಿದೆನೆಂಬ ಹೊರೆಯನೆನಗೆ ಹೊರೆಸದಿರಯ್ಯ' ಹಾಗೂ 'ನಾನು ಹಾರುವನೆಂದರೆ ಸಂಗಯ್ಯ ನಗುವನಯ್ಯ' ಎಂಬಿತ್ಯಾದಿ ವಚನಗಳನ್ನು ಉಲ್ಲೇಖಿಸಿ ಬಸವಣ್ಣ ತಾವು ಸ್ವತಃ ಉಚ್ಚ ಕುಲದಲ್ಲಿ ಹುಟ್ಟಿದರೂ ಅದನ್ನು ನಿರಾಕರಿಸಿ 'ಅಪ್ಪನು ನಮ್ಮ ಡೋಹರ ಕಕ್ಕಯ್ಯ, ಬೊಪ್ಪನು ನಮ್ಮ ಮಾದಾರ ಚೆನ್ನಯ್ಯ' ಎಂದು ಹಾಡಿ ಕೆಳವರ್ಗದವರಲ್ಲಿ ಸ್ಥೈರ್ಯ ತುಂಬಿ, ಜಾತ್ಯಾತೀತ ನಿಲುವನ್ನು ಅನುಷ್ಠಾನಗೊಳಿಸುವಲ್ಲಿ ಮಾದರಿಯಾಗಿದ್ದೊಂದು ಅಪೂರ್ವ ದಾಖಲೆ. ಇದು ವಿಶ್ವದಲ್ಲಿಯೇ ಒಂದು ಅಪರೂಪದ ಉದಾಹರಣೆ ಎಂದು ಹೇಳುತ್ತಾ ಈ ಜಾತ್ಯಾತೀತ ಧೋರಣೆ ಮತ್ತು ಧರ್ಮ ನಿರಪೇಕ್ಷಣಾ ಮನೋವೃತ್ತಿಯಿಂದ ಭಯೋತ್ಪಾದನೆಯ ನಿರ್ಮೂಲನೆ ಸಾಧ್ಯ ಎಂದು ಪ್ರತಿಪಾದಿಸಿದರು.

'ಸಂಪತ್ತು ಮತ್ತು ಆಧ್ಯಾತ್ಮ' (Prosperity and Spirituality) ಎಂಬ ವಿಷಯದ ಬಗ್ಗೆ ನಾನು ಪ್ರಬಂಧ ಮಂಡಿಸಿ, ಅಂದಿನ ಸಮ್ಮೇಳನದ ಧ್ಯೇಯೋದ್ದೇಶವಾದ ಕಾಯಕದ ದೃಷ್ಟಿಯಿಂದ ಇದನ್ನು ವಿಶ್ಲೇಷಣೆ ಮಾಡಿದೆ. ಸಂಪತ್ತು ಎಂಬುದು ಭೌತಿಕ ಸಂಬಂಧಿಸಿದ್ದಾರೆ ಆಧ್ಯಾತ್ಮ ಎಂಬುದು ಅಂತರಂಗಕ್ಕೆ ಸಂಬಂಧಿಸಿದ್ದು. ಸಿರಿವಂತಿಕೆಯನ್ನು ವಸ್ತುಗಳ ರೂಪದಲ್ಲಿ ಅಳೆಯಬಹುದು- ಭೂಮಿ, ಬಂಗಾರ, ಉದ್ದಿಮೆ, ಶೇರು, ಹಣ ಇತ್ಯಾದಿಗಳು ವಸ್ತುರೂಪದಲ್ಲಿದ್ದು ಉದ್ದಗಲಕ್ಕೆ ಸಿಗುವಂತಹವು. ಎಷ್ಟೇ ಸಂಪತ್ತು ಶೇಖರಣೆಯಾದರೂ ಅದನ್ನು ಲೆಕ್ಕ ಹಾಕಬಹುದು. ಅಳತೆ ಮಾಡಬಹುದು. ಆದರೆ ಆಧ್ಯಾತ್ಮದಿಂಗಾಗುವ ಪರಿಣಾಮ ಅಗಮ್ಯ, ಅಗೋಚರ ಹಾಗೂ ಅಪ್ರತಿಮ. ಹಣದಿಂದಾಗುವ, ಬಂಗಾರದಿಂದ ಸಿಗುವ ಆನಂದ ತಾತ್ಕಾಲಿಕವಾದದ್ದು ಸಂಪತ್ತು ಗಳಿಕೆಯ ಮಾರ್ಗ ವಾಮವಾಗಿದ್ದಾಗಲಂತೂ ಅಲ್ಲಾಗುವ ಕಿರುಕುಳ, ಮಾನಸಿಕ ಹಿಂಸೆ ಹೇಳತೀರದಷ್ಟು ಗಳಿಕೆಯ ದಾಹವಂತೂ ತಣಿಸಲಾರದಂತಹುದು. 'ಆಸೆ' ಎಂಬುದು ಅರಸಂಗಲ್ಲದೆ ಶಿವಭಕ್ತರಿಗೆ ಉಂಟೇ ಅಯ್ಯಾ' ಎಂಬ ಲಕ್ಕಮ್ಮನವರ ವಚನದ ಸಾಲುಗಳನ್ನು ಹಾಗೂ 'ಆಸೆಯೇ ದುಃಖಕ್ಕೆ ಮೂಲ ಕಾರಣ' ಎಂಬ ಬುದ್ಧನ ಮಾತುಗಳನ್ನು ಉಲ್ಲೇಖಿಸುತ್ತ, ಆಸೆಯೆಂಬುದು ಒಂದಕ್ಕೆ ಬಾಯಿ ಹಾಕಿದರೆ ದುರಾಶೆಯೆಂಬುದು ಮತ್ತೊಂದಕ್ಕೆ ಬಾಯ್ಹಾಕುತ್ತದೆ. ಹೀಗಾಗಿ ಸಿರಿವಂತಿಕೆಯ ಆಶೆ ನಮ್ಮನ್ನೇ ತಿಂದು ಹಾಕುತ್ತದೆ ಎಂದು. 'ಹಬ್ಬಕ್ಕೆ ತಂದ ಹರಕೆಯ ಕುರಿ ತೋರಣಕ್ಕೆ ತಂದ ತಳಿರ ಮೇಯ್ದಿತ್ತು' ಎಂಬ ವಚನಗಳನ್ನು ಉಲ್ಲೇಖಿಸಿದೆನು.

ಸಂಪತ್ತು ಗಳಿಕೆಯ ಆಶೆಗೆ ಮಿತಿ ಇರಬೇಕೆಂದು ಕಾಯಕ ಸತ್ಯ ಶುದ್ಧವಾಗಿರಬೇಕೆಂದು ಮತ್ತು ಆಧ್ಯಾತ್ಮ ಯೋಗ ಸಾಧನೆಗಳನ್ನು ಅಳವಡಿಸಿಕೊಂಡದ್ದಾದರೆ ಮನುಷ್ಯನ ಅಂತರಂಗದ ವ್ಯಕ್ತಿತ್ವ ವಿಕಸನಗೊಂಡು ಆತ ಯೋಗಿಗೆ ಸರಿಸಮಾನವಾದ ಸಿದ್ಧಿ ಸಂತೋಷಗಳನ್ನು ಪಡೆಯಬಲ್ಲನೆಂದು, 'ಅಗ್ನಿಯ ಸುಡುವಲ್ಲಿ ಉದಕವ ತೊಳೆವಲ್ಲಿ, ವಾಯುವ ಮೆಟ್ಟಿ ಆಕಾಶವ ಹಿಡಿವಲ್ಲಿ ಯೋಗದ ಹೊಲಬ ನೀವೆತ್ತ ಬಲ್ಲಿರೊ' ಎಂಬ ಅಲ್ಲಮಪ್ರಭುಗಳ ವಚನವನ್ನು ವಿಶದಪಡಿಸಿದೆ. ಮಾನವ ಎಷ್ಟೇ ಸಿರಿವಂತಿಕೆ ಸಂಪಾದಿಸಿದರೂ ತೃಪ್ತಿ ಎಂಬುದು ಮರೀಚಿಕೆಯಾಗಿ ಆತ ವಿಫಲನಾದಾಗ ಆಧ್ಯಾತ್ಮಿಕ ಸಾಧನೆ, ಯೋಗ ಜೀವನ ಅವನ ನೆರವಿಗೆ ಬರುತ್ತದೆ ಎಂದು ಹೇಳುತ್ತ ಇದೇ ನಿಜವಾದ ಸಿದ್ಧಿ ಎಂದು ಪ್ರತಿಪಾದಿಸಿದೆ. ಇದಕ್ಕಾಗಿ ದೇಗುಲ ನಿರ್ಮಾಣಕ್ಕಿಂತ, ದೇಹವೇ ದೇವಾಲಯದಷ್ಟು ಪವಿತ್ರವಾಗುವಂತಹ ಅಂತರಂಗದ ಶುದ್ಧಿ ಕಾಯ್ದುಕೊಳ್ಳ ಬೇಕೆಂದು, 'ಉಳ್ಳವರು ಶಿವಾಲಯ ಮಾಡುವರು' ನಾನೇನು ಮಾಡಲಿ ಬಡವನು... ದೇಹವೇ ದೇಗುಲ ಶಿರವೇ ಹೊನ್ನ ಕಲಶ' ಎಂಬ ಬಸವಣ್ಣನವರ ವಚನ ಉದಾಹರಿಸಿದೆ. ಈ ಆಧ್ಯಾಅತ್ಮಿಕ ಅಧ್ಯಯನಕ್ಕಾಗಿ ಇಡೀ ವಿಶ್ವ ಇಂದು ಭಾರತದ ಕಡೆ ನೋಡುತ್ತಿದೆ ಎಂದು ಗಮನ ಸೆಳೆಯುವ ಪ್ರಯತ್ನವನ್ನು ಮಾಡಿದೆ.

ಈ ಸಮಾರಂಭದಲ್ಲಿ ಹಿರಿಯರಾದ ಮನವಳ್ಳಿಯವರು ಶಿವಪೂಜೆ ಹಾಗೂ ಶಿವಾಚಾರಗಳ ಬಗ್ಗೆ ವಿವರಣೆ ನೀಡಿದರು. ಮೂವರು ಲೇಖಕರು ಬರೆದ ಮೂರು ಪುಸ್ತಕಗಳನ್ನು ಬಸವರಾಜ ಹೊರಟ್ಟಿಯವರು ಹಾಗೂ ನಾನು ಬಿಡುಗಡೆಗೊಳಿಸಿ ದೂರದ ಅಮೆರಿಕದಲ್ಲಿದ್ದರೂ ಭಾರತೀಯ ಸಂಸ್ಕೃತಿ ಪರಂಪರೆ ಹಾಗೂ ಧಾರ್ಮಿಕ ಪದ್ಧತಿಗಳ ಬಗ್ಗೆ ಅಪಾರ ಅಭಿಮಾನ ಇರಿಸಿಕೊಂಡು, ಇಂಗ್ಲೀಷ್‌ನಲ್ಲಿ ಗ್ರಂಥ ರಚಿಸಿದ ಅನಿವಾಸಿ ಅಮೆರಿಕ ಹಾಗೂ ಕೆನಡಾ ನಿವಾಸಿಗಳನ್ನು ಅಭಿನಂದಿಸಿದೆವು. ತುಮಕೂರು ದಯಾನಂದರವರು ತಾವು ತಯಾರಿಸಿರುವ ಈ ಬಗೆಗಿನ

ಸಾಕ್ಷ್ಯ ಚಿತ್ರವೊಂದನ್ನು ಪ್ರದರ್ಶಿಸಿದರು.

ಜುಲೈ 7, 8 ಎರಡು ದಿನಗಳ ಈ ಸಮ್ಮೇಳನದ ಎರಡನೇ ದಿನ 'ಕರ್ನಾಟಕದಲ್ಲಿ ಉದ್ಯಮ ಅವಕಾಶಗಳು' ಎಂಬ ವಿಚಾರ ಸಂಕಿರಣದ ಅಧ್ಯಕ್ಷತೆಯನ್ನು ಸಚಿವ ಹೊರಟ್ಟಿಯವರೇ ವಹಿಸಿದ್ದರು. ಅಮೇರಿಕ ಮತ್ತು ಕೆನಡಾದ ನೂರಾರು ಉದ್ದಿಮೆದಾರರು ಭಾಗವಹಿಸಿ, ಬೆಂಗಳೂರು ಹಾಗೂ ಕರ್ನಾಟಕದಲ್ಲಿ ತಾವು ಉದ್ದಿಮೆ ಪ್ರಾರಂಭಿಸ ಬೇಕೆಂದರೆ ಏನೇನು ಅವಕಾಶ ಮತ್ತು ಸವಲತ್ತುಗಳು ಇವೆ ಎಂದು ಪ್ರಶ್ನಿಸಿದ್ದಕ್ಕೆ, ಹೊರಟ್ಟಿಯವರು ಈ ಬಗ್ಗೆ ತಮ್ಮ ಸರಕಾರ ಎಲ್ಲ ಸಹಾಯ, ಸಹಕಾರ ಹಾಗೂ ವಿಶ್ವದರ್ಜೆಯ ಸವಲತ್ತು ಒದಗಿಸಿದ್ದು ಹೆಚ್ಚಿನ ಮೂಲ ಸೌಕರ್ಯಗಳಿಗಾಗಿ ಮುಖ್ಯಮಂತ್ರಿ ಕುಮಾರಸ್ವಾಮಿಯವರ ಜೊತೆ ಚರ್ಚಿಸಿ ಕ್ರಮ ಕೈಗೊಳ್ಳುವುದಾಗಿ ತಿಳಿಸುತ್ತಾ ಆ ಉದ್ದಿಮೆದಾರರನ್ನು ಕರ್ನಾಟಕಕ್ಕೆ ಬಂದು ಬಂಡವಾಳ ಹೂಡಲು ಸ್ವಾಗತಿಸಿದರು. ಬೆಂಗಳೂರು ಈಗ ಇಡೀ ವಿಶ್ವದ ಗಮನ ಸೆಳೆದಿದ್ದು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನಗಳಿಗೆ ಏಷ್ಯಾದಲ್ಲಿಯೇ ಅತ್ಯಂತ ಸೂಕ್ತ ಸ್ಥಳವಾಗಿದ್ದು ಅಲ್ಲಿಯ ಆಹ್ಲಾದಕರ ಹವಾಮಾನ, ಭಾಷೆ ಹಾಗೂ ಕೋಮು ಸೌಹಾರ್ದತೆಗಳು ಎಲ್ಲ ಪ್ರದೇಶಗಳಿಗೂ ಮಾದರಿ ಎಂಬ ವಿವರಗಳನ್ನು ನಾನು ತಿಳಿಸಿಕೊಟ್ಟೆ ಇದಲ್ಲದೆ ಮಂಗಳೂರು, ಮೈಸೂರು, ಹುಬ್ಬಳ್ಳಿ, ಧಾರವಾಡ, ಬೆಳಗಾವಿ, ಹಾಸನ, ಗುಲಬರ್ಗಗಳೂ ಉದ್ದಿಮೆದಾರರಿಗೆ ಸೂಕ್ತ ಸ್ಥಳವಾಗಿವೆ ಎಂದೆ.

ಮೇರಿಲ್ಯಾಂಡ್‌ನ ಜೆ.ಎಸ್.ಎಸ್. ನ ಆಧ್ಯಾತ್ಮಿಕ ಕೇಂದ್ರ ದಲ್ಲಿ ನಡೆದ ಗುರುವಂದನಾ ಕಾರ್ಯಕ್ರಮವೂ ಉಲ್ಲೇಖಾರ್ಹವಾಗಿದೆ. ಅಂದಾಜು ಐವತ್ತು ಎಕರೆ ಪ್ರದೇಶ ದಲ್ಲಿ ವ್ಯಾಪಿಸಿಕೊಂಡಿರುವ ಈ ಆಧ್ಯಾತ್ಮಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಸಮುಚ್ಚಯ ಸುತ್ತೂರು ಶ್ರೀಗಳ ದೂರದೃಷ್ಟಿ ಮತ್ತು ಕಾರ್ಯಕ್ಷಮತೆಗೆ ಸಾಕ್ಷಿಭೂತವಾಗಿ ಇಲ್ಲಿಯ ಅನಿವಾಸಿ ಭಾರತೀಯರ ವಿಧಾಯಕ ಚಟುವಟಿಕೆಗಳಿಗೆ ಕೇಂದ್ರಬಿಂದುವಾಗಿ ಕಂಗೊಳಿಸುತ್ತಿದೆ. ಈಗಾಗಲೇ ಶಿವ, ಚಾಮುಂಡೇಶ್ವರಿ ಹಾಗೂ ಗಣಪತಿಗಳಿರುವ ಒಂದು ಸುಂದರ ದೇವಾಲಯ, ಭವ್ಯ ಸಭಾಂಗಣ, ಅತಿಥಿಗೃಹ ಹಾಗೂ ಭೋಜನಶಾಲೆಗಳನ್ನು ಹೊಂದಿರುವ ಇದು ದಿನನಿತ್ಯ ನೂರಾರು ಪ್ರವಾಸಿಗರನ್ನು ಆಕರ್ಷಿಸುತ್ತಿದೆ. ವಾಷಿಂಗ್ಟನ್, ವರ್ಜೀನಿಯಾ, ಡೆಟ್ರಾಯ್ಟ್ ಮೇರಿಲ್ಯಾಂಡ್ ಮುಂತಾದ ಕಡೆಯ ಅಕ್ಕ ಮತ್ತು ಕಾವೇರಿ ಕನ್ನಡ ಸಂಘಟನೆಗಳು, ವಿ.ಎಸ್.ಎನ್.ಎ. ಸಂಸ್ಥೆಯ ಶಾಖಾ ಸಂಸ್ಥೆಗಳು ಮತ್ತು ಜೆ.ಎಸ್.ಎಸ್. ಆಧ್ಯಾತ್ಮಿಕ ಕೇಂದ್ರದವರು, ಸುತ್ತೂರು ಜಗದ್ಗುರು ಶ್ರೀ ದೇಶಿಕೇಂದ್ರ ಮಹಾಸ್ವಾಮಿಗಳ ನಿರ್ದೇಶನದಲ್ಲಿ ಆಯೋಜಿಸಿದ ಇಲ್ಲಿಯ ಸಾಂಸ್ಕೃತಿಕ ಸಮಾರಂಭದಲ್ಲಿ ತುಮಕೂರಿನ ಸಿದ್ಧಗಂಗಾ ಶ್ರೀಗಳಾದ ಡಾ॥ ಶ್ರೀ ಶ್ರೀ ಶಿವಕುಮಾರಸ್ವಾಮಿಗಳ ಅಭಿನಂದನಾ ಕಾರ್ಯಕ್ರಮ ಏರ್ಪಡಿಸಿದ್ದು ಔಚಿತ್ಯಪೂರ್ಣವಾಗಿತ್ತು. ಶಶಿಕಲಾ, ರಾಜಶೇಖರ್, ಜಯಶ್ರೀ ಜಗದೀಶ್, ಸಿದ್ಧಲಿಂಗಯ್ಯ, ಪ್ರಕಾಶ್ ಮುಂತಾದವರ ನೇತೃತ್ವದಲ್ಲಿ ನಡೆದ ಈ ಸಮಾರಂಭವನ್ನು ಶಿಕ್ಷಣ ಸಚಿವ ಬಸವರಾಜ ಹೊರಟ್ಟಿಯವರು ಉದ್ಘಾಟಿಸಿ 'ಪ್ರತಿನಿತ್ಯ ಪೂಜ್ಯ ಸಿದ್ಧಗಂಗಾ ಸ್ವಾಮಿಗಳು 9000 ವಿದ್ಯಾರ್ಥಿ ಹಾಗೂ ಭಕ್ತರಿಗೆ ಜಾತಿ, ಮತ, ಧರ್ಮ ಭೇದವಿಲ್ಲದೇ ದಾಸೋಹ ಕಾರ್ಯ ಏರ್ಪಡಿಸಿ ಜಗದ್ವಂದ್ಯರಾಗಿದ್ದಾರೆ. ಈ ಆದರ್ಶ ಕಾರ್ಯಕ್ಕಾಗಿ ಕರ್ನಾಟಕ ಸರಕಾರ ಶ್ರೀಗಳಿಗೆ 'ಕರ್ನಾಟಕ ರತ್ನ' ಪ್ರಶಸ್ತಿ ನೀಡಿ ತನ್ನನ್ನು ತಾನೇ ಗೌರವಿಸಿಕೊಂಡಿದೆ' ಎಂದರು. 'ಶ್ರೀಗಳಿಗೆ 'ಭಾರತ ರತ್ನ' ಪ್ರಶಸ್ತಿ ಎಂದೋ ಬರಬೇಕಿತ್ತು. ಅದು ಈಗಲಾದರೂ ಬರಲಿ ಎಂದು ಹಾರೈಸಿದರು. ಅಭಿನಂದನಾ ಭಾಷಣ ಮಾಡಿದ ನಾನು, ಮೈಸೂರಿನ ಸುತ್ತೂರು ಜಗದ್ಗುರುಗಳು ಭಾರತದಲ್ಲಿದ್ದು ಕೊಂಡೇ ಅಮೇರಿಕದ ಇಂತಹ ಕಾರ್ಯಕ್ರಮ ಏರ್ಪಡಿಸಿದ್ದು ಸ್ತುತ್ಯರ್ಹ. ಇಂತಹ ಅನುಪಮ ಕಾರ್ಯಕ್ಕಾಗಿ ಅವರೂ ಅಭಿನಂದಾರ್ಹರು. ಡಾ॥ ಶಿವಕುಮಾರಸ್ವಾಮಿಗಳು ಸಿದ್ಧಗಂಗೆಯಲ್ಲಿ ದಾಸೋಹಗಂಗೆ, ಜ್ಞಾನಗಂಗೆ, ಕಾರುಣ್ಯ ಗಂಗೆ ಹಾಗೂ ಕಾಯಕ ಗಂಗೆಗಳಂತಹ ಅನನ್ಯ ಗಂಗಾ ಪ್ರವಾಹವನ್ನೇ ಹರಿಸುತ್ತಿದ್ದು, ವಿಶ್ವದ ಯಾವುದೇ ಒಬ್ಬ ವ್ಯಕ್ತಿ ಅಥವಾ ಸಂಸ್ಥೆ ಮಾಡಲಾರದಂತಹ ಅಪೂರ್ವ ಕಾರ್ಯವನ್ನು ಮಾಡಿ ನಿಜ ಅರ್ಥದಲ್ಲಿ ಜಗದ್ಗುರು ಗಳಾಗಿದ್ದಾರೆ' ಎಂದು ಹೇಳಿ ಸ್ವರಚಿತ ಕವನ 'ಶರಣು ಸಿದ್ಧಗಂಗೆಯ ಸಂತಗೆ' ಎಂಬುದನ್ನು ವಾಚಿಸಿದೆ. ಈ ಕಾರ್ಯಕ್ರಮದಲ್ಲಿ ಅಕ್ಕ ಕನ್ನಡ ಕೂಟದ ಕಾರ್ಯಕಾರಿ ಸಮಿತಿ ಅಧ್ಯಕ್ಷರಾದ ಅಮರನಾಥಗೌಡರೂ ಮಾತನಾಡಿ ಅಭಿನಂದನೆ ಸಲ್ಲಿಸಿದರು. ಡಾ॥ ವಿನಯ ಪ್ರಭಾ ಬಳಿಗಾರ್ ರವರು ಹಾಡಿರುವ ವಚನಗಳ ಸಿ.ಡಿ. 'ವಚನಾಮೃತ'ವನ್ನು ಬಿಡುಗಡೆಗೊಳಿಸಿದರು. ಕಾವೇರಿ ಕನ್ನಡ ಸಂಘ, ಅಕ್ಕ ಕನ್ನಡ ಕೂಟಗಳ ಪದಾದಿಕಾರಿಗಳಾದ ನಾರಾಯಣಸ್ವಾಮಿ, ನಾಗಶಂಕರ್, ಡಾ॥ ಜಿ. ಜಗದೀಶ್, ಸಂಜಯರಾವ್, ಡಾ॥ ಮೃತ್ಯುಂಜಯ ಮುಂತಾದವರು ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರು. ಪ್ರೊ. ಚನ್ನಬಸಪ್ಪನವರು ಸಭೆಯ ಅಧ್ಯಕ್ಷತೆ ವಹಿಸಿದ್ದರು.

ಹೀಗೆ ಅಮೇರಿಕದಲ್ಲಿದ್ದುಕೊಂಡು, ಕನ್ನಡ, ಕರ್ನಾಟಕದ ಕೆಲಸ ಮಾಡುತ್ತ ಭಾರತೀಯತೆಯನ್ನು ಮೆರೆಯುತ್ತಿರುವ ಅನಿವಾಸಿ ಅಮೇರಿಕನ್ನರು ನಮ್ಮೆಲ್ಲರ ಅಭಿಮಾನಕ್ಕೆ, ಅಭಿನಂದನೆಗೆ ಪಾತ್ರರಾಗಿದ್ದಾರೆ. ಅವರೊಡನೆಯ ಹದಿನೈದು ದಿನಗಳ ಒಡನಾಟ ಚಿರಸ್ಮರಣೀಯವೆನಿಸುತ್ತದೆ.

ಕೃಪೆ : ವಿಜಯ ಕರ್ನಾಟಕ



## ಆಧುನಿಕ ವಚನಗಳು

ಶಿವನ ಕಾಣಲು ಕೆಲವರು ದೇವಾಲಯದಲಿ
ತಪವನಾಚರಿಸುವರಯ್ಯಾ ! ಶಿವನ ದರುಶನಕಾಗಿ
ಕೆಲವರು ಗುಹೆಗಳಲ್ಲಿ ಯೋಗ ಸಾಧನೆ
ಮಾಡುವರಯ್ಯಾ ಶಿವನ ನೋಡಲು ಹಲವರು
ಯಜ್ಞಯಾಗ ಪೂಜೆ ಮಾಡುವರಯ್ಯಾ
ಸಿದ್ಧಗಂಗೆಯ ಸಿದ್ಧ ಶ್ರೀ ಶಿವಕುಮಾರ ಶ್ರೀಗಳು
ಅನಾಥಮಕ್ಕಳ ಸೇವೆಯಲಿ ನಿತ್ಯ ಶಿವನ
ಕಾಣುವರಯ್ಯಾ !
ಶ್ರೀ ಸಿದ್ಧಲಿಂಗೇಶ್ವರನೊಡನೆ ಮಾತಾಡುವರಯ್ಯಾ

* * *

ಮಠಮಂದಿರ ಮಸೀದಿ, ಚರ್ಚುಗಳ ನಿರ್ಮಿಸಿ
ಮೆರೆದವರು ಮೃತರಾದ ಮರುದಿನವೇ ಮರೆತು
ಹೋಗುವರಯ್ಯಾ ! ಸಂಸ್ಥೆಗಳನು ಸ್ಥಾಪಿಸಿ ಕೀರ್ತಿ
ಪಡೆದವರು ಅಸುನೀಗಿದ ಮೇಲೆ ಹೇಳ
ಹೆಸರಿಲ್ಲದಾಗುವರಯ್ಯಾ ! ನಿಧನರಾಗುತ್ತಲೇ
ಅಜ್ಞಾತರಾಗುವರಯ್ಯಾ ! ಮಾನವನು ಕಷ್ಟ,
ಅರಿಷಡ್ವರ್ಗಗಳನು ಮೆಟ್ಟಿ ಅನಾಥಮಕ್ಕಳನು ಉದ್ಧರಿಸಿದ
ಶ್ರೀ ಶಿವಕುಮಾರಶ್ರೀಗಳು ಜನಮನದಲಿ ನಿರಂತರ
ಉಳಿಯುವರಯ್ಯಾ ಶ್ರೀಗುರು ಸಿದ್ಧಲಿಂಗೇಶ್ವರನಿಗೆ
ಪ್ರಿಯರಾಗುವರಯ್ಯ

* * *

ಹಣದ ಹುಚ್ಚು ವಾಸಿಯಾಗದ ಕಾಯಿಲೆಯಯ್ಯಾ!
ಅಧಿಕಾರದ ದಾಹ ತಣಿಸಲಾರದ ಬಾಯಾರಿಕೆ ಅಯ್ಯಾ!
ಅಧಿಕಾರ-ಹಣದ ಹಂಬಲವುನಿದ್ದೆಗೆಡಿಸುವದಯ್ಯಾ
ಸಂಬಂಧಗಳನು ಕೆಡಿಸುವುದಯ್ಯಾ !
ನೀತಿ ಧರ್ಮಗಳನು ಬಿಡಿಸುವುದಯ್ಯಾ !
ಶಾಂತಿ ಸಂತೃಪ್ತಿಗಳನು ಅಳಿಸುವುದಯ್ಯಾ !
ಬೆಂತರನಂತೆ ದಿಕ್ಕುದಿಕ್ಕುಗಳಿಗೆ ಓಡಿಸುವುದಯಾ !
ಅಪಮೃತ್ಯುವಿಗೆ ಈಡುಮಾಡುವುದಯ್ಯಾ !
ಶ್ರೀಗುರುಸಿದ್ಧಲಿಂಗೇಶ್ವರಾ
ಲೋಕದ ಹಣ-ಅಧಿಕಾರ ದಾಹವನು ಅಳಿಸಯ್ಯಾ

* * *

ಅಯ್ಯಾ ಶಿವನೇ !
ನೀನು 'ಪರದೇಶಿ' ಎಂದು
ನಿತ್ಯ ನಿನಗೆ ಅಭಿಷೇಕ ಮಾಡುವೆ !
ಬಟ್ಟೆ ಹೊದಿಸುವೆ, ರುದ್ರಾಕ್ಷಿ ಭಸ್ಮ ಧರಿಸುವೆ !
ಗಂಧಾಕ್ಷತೆ ಪತ್ರೆ ಪುಷ್ಪಗಳಿಂದ ಅಲಂಕರಿಸುವೆ !
ನಿನಗೆ ದೃಷ್ಟಿಯಾಗದಿರಲೆಂದು ಧೂಪ ಹಾಕುವೆ !
ದೀಪ ಬೆಳಗುವೆ, ನೈವೇದ್ಯ ಅರ್ಪಿಸುವೆ !
ಸರ್ವಾಲಂಕೃತನಾದ ನಿನ್ನನು ಏನನ್ನೂ ಬೇಡೆನು !
ನೀನು ಎನ್ನನು ನಿನ್ನ ಹೆಚ್ಚಿನ ಭಕ್ತನೆಂದು ತಿಳಿದರೆ
ಸಾಕು!
ಶ್ರೀ ಗುರುಸಿದ್ಧಲಿಂಗೇಶ್ವರಾ

–ಸಾಹಿತ್ಯರತ್ನ, ಶರಣಸಾಹಿತ್ಯ ತಪಸ್ವಿ
ಅನ್ನದಾನಯ್ಯ ಪುರಾಣಿಕ

## ಸೋಮೇಶ್ವರ ಶತಕ

ಹರನಿಂದುರ್ವಿಗೆ ದೈವವೆ ಕಿರಣಕಿಂದುಂಬಿಟ್ಟು
ಸೊಂಪುಂಟೆ ಪೆ ।
ತ್ತರಿಗಿಂತುಂಟೆ ಹಿತರ್ಕುಲುಂ ಮಡದಿಯಂ
ಬೇರಾಪ್ತರಿನ್ನಿರ್ಪರೇ ॥
ಸರಿಯೇ ವಿದ್ಯಕೆ ಬಂಧು ಮಾರನಿದಿರೊಳ್ ಬಿಲ್ಲಾಳೆ
ಮೂಲೋಕದೊಳ್ ।
ಗುರುವಿಂದುನ್ನತ ಸೇವ್ಯನೇ ಹರಹರಾ
ಶ್ರೀ ಚೆನ್ನಸೋಮೇಶ್ವರಾ ॥

ಲೋಕದಲ್ಲಿ, ಶಿವನಿಗಿಂತ ದೊಡ್ಡ ದೇವರೂ, ಚಂದ್ರ ಕಿರಣ ಕ್ಕಿಂತ ಹೆಚ್ಚಾಗಿ ಆನಂದವನ್ನು ಕೊಡುವ ಕಿರಣವೂ, ತಂದೆ ತಾಯಿಗಳನ್ನು ಮೀರಿದ ಹಿತಚಿಂತಕರೂ, ಹೆಂಡತಿ ಗಿಂತ ಹೆಚ್ಚಿನವರಾದ ಆಪ್ತರೂ, ವಿದ್ಯೆಗಿಂತ ಹೆಚ್ಚಾದ ನೆಂಟರೂ, ಮನ್ಮಥನನ್ನು ಮೀರಿದ ಬಿಲ್ಲಾಳೂ, ಸೇವೆ ಮಾಡಿಸಿಕೊಳ್ಳುವುದಕ್ಕೆ ಗುರುವಿಗಿಂತ ಉತ್ತಮನಾದವನೂ ಇಲ್ಲ.

# ಬಸವಣ್ಣನವರ ಹಾಗೂ ಅಕ್ಕಮಹಾದೇವಿಯವರ ವಚನಗಳಲ್ಲಿ ವೈಜ್ಞಾನಿಕ ಅಂಶಗಳು

## ೧. ಮೂರು ಮೂಲ ಭೌತಿಕ ಪರಿಮಾಣಗಳು

-ಡಾ॥ ವ್ಹಿ.ವ್ಹಿ. ಬಾಗಲಕೋಟಿ, ವಿಶ್ವಚೇತನ ಪ್ರಕಾಶನ, ಕಲ್ಯಾಣ್ ಹೌಸಿಂಗ ಕಾಲೋನಿ, ಗೋಕಾಕ-೫೯೧೩೦೭.

**(Three Fundamental Physical quantities) ಮತ್ತು ಅವುಗಳ ಮಾಪನ ಹಾಗೂ ಉಪಕರಣಗಳು :**

ಭೌತಶಾಸ್ತ್ರದ ಎಲ್ಲ ಪ್ರಾಥಮಿಕ ಪಠ್ಯಗಳು ಉದ್ದ, ದ್ರವ್ಯರಾಶಿ ಮತ್ತು ಕಾಲ (Length, Mass and Time) ಮತ್ತು ಇವು ಮೂರು ಭೌತಿಕ ಪರಿಮಾಣಗಳೆಂದು ತಿಳಿಸುತ್ತವೆ. (ಇವುಗಳಲ್ಲದೆ ಇನ್ನೂ ಹೆಚ್ಚಿನ ಪರಿಮಾಣಗಳೂ ಕೂಡಿ ಈಗ ಒಂಭತ್ತಕ್ಕೇರಿವೆ.) ಮೊದಲಿನ ಮೂರರ ಅಳತೆಗಳಿಗಾಗಿ ಏಕಮಾನಗಳಾಗಿವೆ. ಎಮ್.ಕೆ.ಎಸ್., ಸಿ.ಜಿ.ಎಸ್., ಎಫ್.ಪಿ.ಎಸ್. ಮಾಪನ ಪದ್ಧತಿಗಳಿದ್ದು, ಅನುಕ್ರಮವಾಗಿ ಮೀಟರ್, ಕಿಲೋಗ್ರಾಂ, ಸೆಂಡ, ಇವು ಎಮ್.ಕೆ.ಎಸ್. (M.K.S.) ಪದ್ಧತಿಯಲ್ಲೂ ಮತ್ತು ಪೂಟ್(ಅಡಿ) ಪೌಂಡ್, ಸೆಕೆಂಡ್, ಇವುಗಳು ಎಫ್.ಪಿ.ಎಸ್. ಅಥವಾ (ಬ್ರಿಟಿಷ್) ಮಾಪನ ಪದ್ಧತಿಗಳಲ್ಲಿ ಅನುಕ್ರಮವಾಗಿ ಏಕಮಾನಗಳಾಗಿ ಅಂಗೀಕರಿಸಲ್ಪಟ್ಟಿವೆ. ಮಾಪನ ಉಪಕರಣಗಳು, ಅನುಕ್ರಮವಾಗಿ ಮೀಟರ್ ಪಟ್ಟಿ, ತಕ್ಕಡಿ(ತುಲಾಯಂತ್ರ) ಹಾಗೂ ಗಡಿಯಾರಗಳಾಗಿವೆ. ಆದರೆ ಬಸವಣ್ಣನವರು ಬದುಕಿದ್ದ ಕಾಲದಲ್ಲಿ ಈ ಪರಿಮಾಣಗಳನ್ನು ಅಳೆಯುವ ವಿಧಾನಗಳು, ಉಪಕರಣಗಳು ಹೇಗಿದ್ದವು?

(ಅ) ಹನ್ನೆರಡನೆ ಶತಮಾನದ ಕಾಲದಲ್ಲಿ ಬಳಕೆ ಯಾಗುತ್ತಿದ್ದ ಉದ್ದ ಪರಿಮಾಣದ ಅನೇಕ ಏಕಮಾನಗಳು, ಅವುಗಳ ಉಲ್ಲೇಖ, ಬಸವಣ್ಣನವರ ವಚನವೊಂದರಲ್ಲಿದೆ. ಈಗಲೂ ಜಾನಪದದಲ್ಲಿರುವ ಹಲವು ಏಕಮಾನಗಳನ್ನೂ, ಅವುಗಳ ನಡುವಿನ ಸಂಬಂಧಗಳನ್ನು ಅದರಲ್ಲಿ ಹೇಳಿದ್ದಾರೆ, ಅದು :

*ಅಂಗುಲ ಹನ್ನೆರಡು ಕೂಡಲು ಒಂದು ಗೇಣು,*
*ಗೇಣು ಎರಡು ಕೂಡಲು ಒಂದು ಮೊಳ,*
*ಮೊಳವೆರಡು ಕೂಡಲು ಒಂದು ಹಸ್ತ,*
*ಹಸ್ತವೆರಡು ಕೂಡಲು ಒಂದು ಮಾರು,*
*ಮಾರೆರಡು ಕೂಡಲು ಒಂದು ಜಂಘ,*
*ಜಂಘ ಏಳುನೂರೆಪ್ಪತ್ತು ಕೂಡಲು ಒಂದು ಪಾದಚ್ಛಯ,*
*ಪಾದಚ್ಛಯ ಎರಡು ಸಾವಿರದೆಂಟು ನೂರು ಕೂಡಲು ಒಂದು ಕೂಗಳತೆ*
*ಕೂಗಳತೆ ನಾಲ್ಕು ಕೂಡಲು ಒಂದು ಹರದಾರಿ,*
*ಹರದಾರಿ ನಾಲ್ಕು ಕೂಡಲು ಒಂದು ಯೋಜನ,*
*ಅಂಥ ಯೋಜನ ನಾಲ್ಕು ಚೌಕಕ್ಕೂ ಹನ್ನೆರಡು ಕೂಡಲು*
*ಬಳಸಿ ನಾಲ್ವತ್ತೆಂಟು ಯೋಜನ ಪ್ರಮಾಣಿನ ಕಟ್ಟಳೆ ಯಾಯಿತ್ತು*
*ಇಂತಪ್ಪ ಕಟ್ಟಳೆಯಾಗಿದ್ದ ಕಲ್ಯಾಣದೊಳಗಿರುವ ಗಣಂಗಳೆಲ್ಲರನು*
*ಕೂಡಲಸಂಗಯ್ಯ ನಿಮ್ಮೊಳು ಕಂಡು ಸುಖಿಯಾಗಿರ್ದೆನು.*

ಇಲ್ಲಿ ಉದ್ದ ಪರಿಮಾಣವನ್ನು ಅಳೆಯಲು ಏಕಮಾನಗಳಾಗಿ ಅಂಗುಲ, ಗೇಣು, ಮೊಳ, ಹಸ್ತ, ಮಾರು ಜಂಘಗಳ ಹಾಗೂ ಇನ್ನೂ ಹೆಚ್ಚು ದೂರದ ಉದ್ದಗಳನ್ನು ಅಳೆಯಲು ಪಾದಚ್ಛಯ, ಕೂಗಳತೆ, ಹರದಾರಿ, ಯೋಜನಗಳ ಉಪಯೋಗವಿದ.

ಸಣ್ಣ ಪ್ರಮಾಣದ ದೂರ (ಉದ್ದ)ಗಳನ್ನು ಅಳೆಯಲು ಏಕಮಾನಗಳಾಗಿ ದೇಹದ ಅಂಗಗಳಾದ ಅಂಗುಲ, ಗೇಣು, ಮೊಳ, ಹಸ್ತ ಮಾರು ಇವುಗಳ ಉಪಯೋಗವಿದೆ. ವಚನದಲ್ಲಿ ಹೇಳಿದಂತೆ ಇವುಗಳ ನಡುವಿನ ಸಂಬಂಧಗಳು ಸಾಮಾನ್ಯವಾಗಿ, ಸ್ಥೂಲ ದೃಷ್ಟಿಯಿಂದ ನೋಡಲಾಗಿ ಸರಿಯಾಗಿವೆ. ಈಗಲೂ ಹಳ್ಳಿಗಳಲ್ಲಿ ಜಾನಪದರು, ಮೊಳ, ಮಾರುಗಳನ್ನು ವ್ಯವಹಾರದಲ್ಲಿ ಉಪಯೋಗಿಸುವುದನ್ನು ಕಾಣುತ್ತೇವೆ. ಬಟ್ಟೆಯನ್ನು ಕೊಳ್ಳುವಾಗ ತಮಗೆ ಬೇಕಾದಷ್ಟು ಉದ್ದವನ್ನು ಮೊಳಗಳಲ್ಲಿ ಹೇಳುವುದನ್ನು ಇತ್ತೀಚಿನವರೆಗೂ ಕಾಣುತ್ತಿದ್ದೆವು, ವ್ಯಾಪಾರಸ್ಥರು, ಗ್ರಾಹಕರು ಹೇಳಿದ ಉದ್ದವನ್ನು ಪ್ರಚಲಿತ ಮೀಟರ್‌ಗಳಲ್ಲಿ ಪರಿವರ್ತಿಸಿ, ಅಳತೆ ಮಾಡಿಕೊಟ್ಟು ಲೆಕ್ಕವನ್ನು ಹೇಳುತ್ತಿದ್ದುದುಂಟು. ಕೃಷಿಯಲ್ಲಿ ಉಪಯೋಗಿಸಲು ಬೇಕಾದ ಹಗ್ಗದ ಉದ್ದವನ್ನು ಮಾರುಗಳಲ್ಲಿ ಹೇಳುವುದು ರೂಢಿಯಲ್ಲಿದೆ. ಇದು (ಮಾರು) ಸಹಜವಾಗಿ ಎಲ್ಲರಿಗೂ ಎಲ್ಲಿದ್ದರಲ್ಲಿ ಸಿಗುವಂಥದು ಈ ಏಕಮಾನಗಳು ಮನುಷ್ಯನ ದೇಹಾಂಗಗಳಿಗೆ ಸಂಬಂಧಿಸಿದವುಗಳಾಗಿವೆ.





ದೂರದ ಹೆಚ್ಚಿನ ಉದ್ದದ ಮಾಪನಕ್ಕೆ ಉದಾಹರಣೆಯಾಗಿ ಒಂದು ಪ್ರದೇಶದಲ್ಲಿ, ಒಂದು ಗ್ರಾಮದಿಂದ ಇನ್ನೊಂದು ಗ್ರಾಮಕ್ಕೆ ಇಲ್ಲವೆ, ಇನ್ನೊಂದು ದೂರದ ಸ್ಥಲಕ್ಕೆ ಇರುವ ಅಂತರವನ್ನು ತಿಳಿಯುವುದಕ್ಕೆ ಇನ್ನುಳಿದ ಏಕಮಾನಗಳಾದ ಪಾದಚ್ಛಯ, ಕೂಗಳತೆ, ಹರದಾರಿ, ಯೋಜನ ಇವುಗಳನ್ನು ಉಪಯೋಗಿಸಿದ್ದುಂಟು. ಇತ್ತೀಚಿನವರೆಗೂ ಕೂಗಳತೆ ಹರದಾರಿಗಳ ಬಳಕೆ ಗ್ರಾಮೀಣ ಭಾಗಗಳಲ್ಲಿತ್ತು.

ವಚನಗಳಲ್ಲಿ ಕಲ್ಯಾಣ ಪಟ್ಟಣದ ವಿಸ್ತಾರದ ಕ್ಷೇತ್ರಫಲವು ಪ್ರಸ್ತಾಪಿಸಲ್ಪಟ್ಟಿದೆ. ವಿಸ್ತಾರವನ್ನು ತಿಳಿಸುವ ಉದ್ದೇಶವು ಮುಖ್ಯವಾಗಿದ್ದು ಪ್ರಾಸಂಗಿಕವಾಗಿ ಉದ್ದದ ವಿವಿಧ ಏಕಮಾನಗಳ ಸಾಂದರ್ಭಿಕ ಉಲ್ಲೇಖವಾಗಿದೆಯೇ ಹೊರತು, ಏಕಮಾನದ ಅಧ್ಯಯನ ಮತ್ತು ಕಲಿಸುವುದು ಎಂಬುವಂತಿಲ್ಲ. ಆಧುನಿಕ ವಿಜ್ಞಾನದಲ್ಲಿ ಏಕಮಾನಗಳನ್ನು ನಿರ್ಧರಿಸಿದ ನಿಖರತೆ ವಚನಗಳಲ್ಲಿಯ ಏಕಮಾನಗಳಿಗಿಲ್ಲ. ಆದರೂ ಈಗಿನ ಸ್ಟ್ಯಾಂಡರ್ಡ್ ಏಕಮಾನಗಳೊಡನೆ ಹೋಲಿಸಿ ಮೇಲೆ ಹೇಳಿದ ಏಕಮಾನಗಳನ್ನು ಅರ್ಥಮಾಡಿಕೊಳ್ಳಬಹುದು. ಆಗಿನ ಕಾಲದ ಪರಿಸರಕ್ಕನುಗುಣವಾಗಿ ವೈಜ್ಞಾನಿಕತೆಯನ್ನು ವಚನಗಳಲ್ಲಿ ಕಂಡುಕೊಳ್ಳಬಹುದು.

ಆ) ವಚನಗಳಲ್ಲಿ ಕಾಲ (Time) ಹಾಗೂ ಅದರ ಮಾಪನ:

ಮಹಾಶರಣೆ ಅಕ್ಕಮಹಾದೇವಿಯವರು, ಕೆಳಗೆ ಕೊಟ್ಟ ವಚನವೊಂದರಲ್ಲಿ, ಮೂಲ ಭೌತ ಪರಿಮಾಣಗಳಲ್ಲಿ ಒಂದಾದ ಕಾಲ(Time) ದ ಮಾಪನ(ಅಳತೆ) ಮತ್ತು ಏಕಮಾನದ ಬಗ್ಗೆ ಉಲ್ಲೇಖಿಸಿದ್ದಾರೆ:

*ಉದಯಾಸ್ತಮಾನ ಎಂಬೆರಡು ಕೊಳಗದಲ್ಲಿ*
*ಆಯುಷ್ಯವೆಂಬ ರಾಶಿ ಅಳೆದು ತೀರದ ಮುನ್ನ*
*ಶಿವನ ನೆನೆಯಿರೆ, ಶಿವನ ನೆನೆಯಿರೆ, ಈ ಜನ್ಮ ಬಳಿಕಿಲ್ಲ*
*ಚೆನ್ನಮಲ್ಲಿಕಾರ್ಜುನ ದೇವರ ದೇವನ ನೆನೆದು*
*ಪಂಚಮಹಾಪಾತಕರೆಲ್ಲರು ಮುಕ್ತಿ ಪಡೆದರಂದು*

ಸದ್ಯದ ವಚನವನ್ನು ಎರಡು ಭಾಗಗಳಾಗಿಸಿ ವಿಶ್ಲೇಷಿಸಿದರೆ, ಮೊದಲನೆಯದರಲ್ಲಿ ಲೌಕಿಕ ವಿಚಾರವಿದೆ. ಇಲ್ಲಿಯ ದೃಷ್ಟಿಕೋನವನ್ನು ವೈಜ್ಞಾನಿಕವೆನ್ನಬಹುದು. ಎರಡನೆಯದು, ಆಧ್ಯಾತ್ಮಿಕಕ್ಕೆ ಸಂಬಂಧಿಸಿದ್ದು, ಆತ್ಮೋದ್ಧಾರಕ್ಕೆ ನಿರ್ದೇಶನ ಹೊಂದಿದ್ದು.

ಅನುಕ್ರಮವಾಗಿ ಎರಡು ಸೂರ್ಯೋದಯಗಳ ನಡುವಿನ ಅಥವಾ ಒಂದಾದ ಮೇಲೊಂದು ಎರಡು ಸೂರ್ಯಾಸ್ತಗಳ ನಡುವಿನ ಕಾಲಾಂತರವಾದ ಒಂದು ದಿನವನ್ನು ಕಾಲ ಪರಿಮಾಣವನ್ನು ಅಳೆಯುವ ಕೊಳಗ (ಏಕಮಾನ)ವೆಂದು ತಿಳಿದು, ಮಾನವನ ಹುಟ್ಟು-ಸಾವುಗಳ ನಡುವಿನ ಆಯುಷ್ಯದ(ಅವಧಿ) ರಾಶಿಯನ್ನು ದಿನಗಳಲ್ಲಿ ಅಳೆಯುತ್ತ ಹೋದಾಗ, ಅದು ತೀರುತ್ತ ಹೋಗುತ್ತದೆ. ಇಲ್ಲಿ ಕಾಲಮಾಪನಕ್ಕೆ ದಿನವು ಏಕಮಾನವೆಂಬುದು ವಚನದಲ್ಲಿದೆ. ದೊಡ್ಡ ಏಕಮಾನಗಳಾದ ವಾರ, ಪಕ್ಷ, ತಿಂಗಳು, ವರ್ಷ, ಶತಮಾನ- ಇತ್ಯಾದಿಗಳೂ ಸಣ್ಣ ಏಕಮಾನಗಳಾದ ನಿಮಿಷ ಇತ್ಯಾದಿಗಳು ಇತರ ವಚಗಳಲ್ಲಿ ಕಾಣ ಸಿಗುತ್ತವೆ.

ಆಧುನಿಕ ವೈಜ್ಞಾನಿಕ ಜಗತ್ತು ಸೆಕೆಂಡನ್ನು ಮೂಲ ಭೌತ ಪರಿಮಾಣ ಕಾಲದ ಏಕಮಾನವೆಂದು ನಿರ್ಧರಿಸಿ ಮನ್ನಿಸಿದೆ. ಎಮ್.ಕೆ.ಎಸ್., ಸಿ.ಜಿ.ಎಸ್., ಮತ್ತು ಎಫ್.ಪಿ.ಎಸ್. ಈ ಮೂರೂ ಏಕಮಾನ ಪದ್ಧತಿಗಳು ಸೆಕೆಂಡನ್ನು ಮಾತ್ರ ಕಾಲದ ಏಕಮಾನವೆಂದು ಅಂಗೀಕರಿಸಿವೆ. ಸೆಕೆಂಡ್ ಇದು ಒಂದು ದಿನದ (24 X 60 X 60) = 86,400 ಸಮಭಾಗಗಳಲ್ಲಿ ಓಂದಾಗಿರುತ್ತದೆ. ಅದರ ಅಳತೆಯ ಉಪಕರಣವು ಗಡಿಯಾರ. ಇಪ್ಪತ್ತನೆಯ ಶತಮಾನಕ್ಕಿಂತಲೂ, ಮೊದಲು ಕಾಲ ಮತ್ತು ಬಯಲು ಇವು ಬೇರೆ ಬೇರೆ ಎಂಬ ಕಲ್ಪನೆಯಿತ್ತು. ಆದರೆ ಐನ್‌ಸ್ಟೈನ್‌ರು ಸಾಪೇಕ್ಷತಾ ಸಿದ್ಧಾಂತವನ್ನು ಪ್ರಕಟಿಸಿಯಾದ ಮೇಲೆ ಕಾಲ ಮತ್ತು ಬಯಲು ಇವುಗಳನ್ನು ಬೇರೆ ಬೇರೆಯಾಗಿ ಪರಿಗಣಿಸುವಂತಿಲ್ಲ, ಅವುಗಳನ್ನು ಕಾಲ ಬಯಲುಗಳ ಸಂಯುಕ್ತವೆಂದು ಪರಿಗಣಿಸಬೇಕು ಎಂದು ಪ್ರತಿಪಾದಿತವಾಯಿತು.

ಅಕ್ಕನು, ಒಂದು ದಿನವು ಕಾಲದ ಕೊಳಗವೆಂದು ಹೇಳಿದ್ದಾಳೆ. ದಿನವು ಎರಡು ಸೂರ್ಯಾಸ್ತಗಳ ನಡುವಿನ ಕಾಲಾವಧಿಯೂ ಹೌದು, ಅಲ್ಲದೆ ಪೃಥ್ವಿಯು ತನ್ನ ಅಕ್ಷದ ಸುತ್ತಲಿನ ಒಂದು ಸುತ್ತಿನ ಪೂರ್ತಿಯೂ ಹೌದು. ಆದ್ದರಿಂದ ಕಾಲ ಮತ್ತು ಬಯಲು ಇವುಗಳನ್ನು ಸಂಯುಕ್ತವಾಗಿ ಪರಿಗಣಿಸಬೇಕು ಎಂಬ ವಿಚಾರವು ಸಿದ್ಧ ವಾಗುತ್ತದೆ.

ವಚನದ ಎರಡನೆಯ, ಆಧ್ಯಾತ್ಮಿಕ ಕೊಳಗವಾದ ದಿನಗಳಿಂದ ಆಯುಷ್ಯವನ್ನು ಅಳೆಯುತ್ತ ಹೋದಾಗ ಅದು ತೀರುತ್ತದೆ. ಮುಂದೆ ಬೇರೆ ಆಯುಷ್ಯವಿಲ್ಲ. ಕಾರಣ ಆಯುಷ್ಯ ತೀರುವ ಮುನ್ನ, ದೇವನ ನೆನೆದು ಜೀವನ ಪಾವನಗೊಳಿಸಿರೆಂಬ ಸೂಚನೆ ಇದೆ. ಇಲ್ಲವಾದರೆ ಬಂದ

ಅವಕಾಶವೇ ಕಳೆದು ಹೋಗುತ್ತದೆ. ಹಿಂದೆ ಪರಮಾತ್ಮನ ಮೊರೆಹೊಕ್ಕು ಮಹಾಪಾತಕಿಗಳೂ ಕೂಡ ಮುಕ್ತಿ ಪಡೆದರು ಎಂದು ನೆನಪಿಸಿಕೊಟ್ಟಿದ್ದಾರೆ ಅಕ್ಕ.

ಕಾಲದ ನಿರಂತರ ಉರುಳುವಿಕೆ, ದೇವನ ಶಾಶ್ವತತೆ:

ಬಸವಣ್ಣನವರ ವಚನವೊಂದರಲ್ಲಿ ಕಾಲ ಚಕ್ರವು ಸತತವಾಗಿ ಕ್ರಮಿಸುತ್ತಿದ್ದರೂ ದೇವನ ಅಸ್ತಿತ್ವವು ಶಾಶ್ವತವಾಗಿ ಕಾಲಾತೀತವಾಗಿರುವುದರಿಂದ ಅವನ ಪೂಜೆಯನ್ನು ಕಾಲದ ಪ್ರಜ್ಞೆಯನ್ನು ಮರೆತು ಮುಂದುವರಿಸುವನು ಎಂಬ ವಿಚಾರವು ಆಧ್ಯಾತ್ಮಿಕ ಭಾಗವಾದರೆ, ಕಾಲಚಕ್ರವು ತನ್ನಷ್ಟಕ್ಕೆ ತಾನೇ ಒಂದೇ ಸಮನೆ ತಿರುಗುತ್ತಲೇ ಇದೆ ಎಂಬ, ಕಾಲದ ಗತಿ ಲಕ್ಷಣ, ಇಲ್ಲವೆ ನಿಯಮ ವೈಜ್ಞಾನಿಕವಾದದ್ದು, ಇವು ಪ್ರತಿಬಿಂಬಿತವಾದ ವಚನವು ಇಂತಿದೆ.

*ವಾರವೆಂದರಿಯೆ, ದಿನವೆಂದರಿಯೆ*
*ಏನೆಂದನರಿಯೆನಯ್ಯಾ*
*ಇರುಳೆಂದರಿಯೆ, ಹಗಲೆಂದರಿಯೆ*
*ಏನೆಂದನರಿಯೆನಯ್ಯಾ*
*ನಿಮ್ಮ ಪೂಜಿಸಿ ಎನ್ನುವ ಮರೆದೆ*
*ಕೂಡಲಸಂಗಮದೇವಾ*

ಸ್ವಯಂಚಾಲಿತವಾಗಿ ಇರುಳು ಕಳೆದು ಹಗಲಾಗುತ್ತದೆ. ಹಗಲು ಕೊನೆಗೊಂಡು ಇರುಳು ಪ್ರಾರಂಭವಾಗುತ್ತದೆ. ಒಂದೊಂದಾಗಿ ದಿನಗಳುರುಳಿ ವಾರಗಳಾಗುತ್ತವೆ, ಹೀಗೆ ಕಾಲಚಕ್ರವು ಗತಿಸುತ್ತಲೇ ನಡೆದು ಘಟನೆಗಳು ಒಂದಾದ ಮೇಲೆ ಒಂದು ಜರುಗುತ್ತವೆ. ಆದರೆ ದೇವನು ಶಾಶ್ವತನಾದ ಕಾರಣ ಕಾಲದ ಪ್ರಜ್ಞೆ ಕಳಚಿ ದೇವನನ್ನು ಪೂಜಿಸುವುದು ಕ್ಷೇಮ ಎಂಬ ಧರ್ಮದರ್ಶನ ಪ್ರಸ್ತುತ ವಚನದಲ್ಲಿದೆ.

**ಕಾಲದ ನಿರಂತರ ಚಲನೆಯಲ್ಲಿ ಸತ್ಸಂಗದ ಮಹತ್ವ :**

ಹಿಂದೆ ಹೇಳಿದ ವಚನದಲ್ಲಿ ಬಸವಣ್ಣನವರು ಕಾಲವು ಉರುಳುತ್ತಿದೆ, ದೇವನು ಶಾಶ್ವತವೆಂದು ತಿಳಿಸಿ ಪೂಜಿಸುವ ಮಹತ್ವವನ್ನು ಮನಗಾಣಿಸಿದರೆ, ಅಕ್ಕಮಹಾದೇವಿಯವರು ತಮ್ಮದೊಂದು ವಚನದಲ್ಲಿ ಕಾಲದ ಪ್ರವಾಹದಲ್ಲಿ ಜಗತ್ತಿನಲ್ಲಿಯ ಜೀವನವನ್ನು ಬರಿಗ್ಗೈಯಿಂದ ಮುಗಿಸದೇ ಪರಮಾತ್ಮನ ಶರಣರ ಸತ್ಸಂಗದಲ್ಲಿ ಮೇಳೈಸಿ ಜೀವನ ಸಾರ್ಥಕಗೊಳಿಸಿರೆಂಬ ಹಿತವಾದವನ್ನು ಅಳವಡಿಸಿ ಕೊಂಡಿದ್ದಾರೆ. ಅದಿರುವುದು ಮುಂದಿನಂತೆ:

ಆಯುಷ್ಯ ಹೋಗುತಿದೆ ಭವಿಷ್ಯ ತೊಲಗುತ್ತಿದೆ,
ಕೂಡಿರ್ದ ಸತಿಸುತರು ತಮತಮಗೆ ಹರಿದು
ಹೋಗುತ್ತೈದಾರೆ
ಬೇಡ ಬೇಡವೆಲೆ ಬಂಜೆಯಾಗಿ ಕೆಡಬೇಡ ಬಯಲಿಂಗೆ
ಮನವೆ,
ಚೆನ್ನಮಲ್ಲಿಕಾರ್ಜುನನ ಶರಣರ ಸಂಗದಲ್ಲಿ
ಹೂಣಿಹೊಕ್ಕು ಬದುಕು ಕಂಡಾ ಮನವೆ

ಕಾಲಚಕ್ರ ಉರುಳುತ್ತಿರುವಾಗ ಆಯುಷ್ಯವು ತೀರುತ್ತದೆ. ಭವಿಷ್ಯವೆಂದು ಕಾಣುವುದು ದಾಟಿ ಹಿಂದಾಗುತ್ತಿದೆ. ಕೂಡಿದ ನೆಂಟರು ತಮ್ಮ ತಮ್ಮ ದಾರಿ ಕಂಡು ದೂರಾಗುತ್ತಿದ್ದಾರೆ. ಮಾನವನು ಕಾಲಸಾಗರದಲ್ಲಿ ಒಂಟಿಯಾಗಿ ಜಗತ್ತಿನ ಜೀವನದಲ್ಲಿ ಏನನ್ನೂ ಸಾಧಿಸದೆ, ನಿರರ್ಥಕವಾಗಿ (ಬಂಜೆಯಾಗಿ) ಆಯುಷ್ಯವನ್ನು ಕಳೆದುಕೊಳ್ಳುವುದು ಬೇಡ ಶರಣ ಸಂಗದಲ್ಲಿದ್ದು ಅರಿವು ಪಡೆದು, ಬದುಕು ಸಾರ್ಥಕ ಮಾಡಿಕೊಳ್ಳಿ ಎಂಬ ನಿರ್ದೇಶನವಿದೆ. ಇದು ಆಧ್ಯಾತ್ಮಿಕ ಅಂಶವಾದರೆ, ನಿಲ್ಲದೆ ಒಂದೇ ಸಮನೆ ಸ್ವಯಂ ಪ್ರೇರಣೆಯಿಂದ ಮುಂದೆ ಉರುಳುವುದು, ಕಾಲದ ಗುಣ ಧರ್ಮ(ನಿಯಮ) ಎಂಬುದು ವಚನದ ಪ್ರಥಮಾರ್ಧದಲ್ಲಿದೆ. ಅದು ಆಯಾ ಕಾಲದ ವೈಜ್ಞಾನಿಕ ವಿಚಾರವಾಗಿದೆ. ಕಾಲದ ಉರುಳುವಿಕೆಯ ಕುರಿತು ಪರಮಪೂಜ್ಯ ಶ್ರೀ ಸಿದ್ಧೇಶ್ವರ ಸ್ವಾಮಿಗಳ ಕವನವೊಂದು ಇವೇ ವಿಚಾರಗಳನ್ನು ವ್ಯಕ್ತಗೊಳಿಸುತ್ತಿದೆ, ಅನುವಾದದೊಂದಿಗೆ ಅದು ಹೀಗಿದೆ.

73 Time Flees
(Page 90, Songs of Silence)
Time fless. As does the space
Streth ever ; Being ; though, beyond senses
Itisfelt somehow, In a wrinkled face,
And a withering rose; This unseen wind,
Ushers in, The Sun, Moon and Stars.
This mysterious flow, Squeezes billionlives
to dust
Oozes many more into life.
This old man of eternam youth, Sweeps
unhindeered The great brain-pearls,
Civilisations, and Azure growth.
Where his dust-bin lie?
W ho knows ? The moment you know,
The Stream of moments Dries up, leaving
behind. The timeless time.





The uncountable whole Divine !
- H.H. Shri. Siddeshwar Swamiji
Gnana Yogashrama, Bijapur.

ಕಾಲ ಹಾರುತಿದೆ :

*ಕಾಲ ಹಾರಿ ಹೋಗುತಿದೆ, ನಿರಂತರ ಅವಕಾಶ,*
*ಹರಡಿಕೊಂಡಿರುವಂತೆ, ಇಂದ್ರಿಯ ಜ್ಞಾನಾತೀತವಾಗಿಯೂ*
*ಹೇಗೋ ಅದರ ಅರಿವಾಗುತಿದೆ;*
*ಸುಕ್ಕುಗಟ್ಟಿದ ಮುಖದಲಿ, ಉದುರುತಿಹ ಗುಲಾಬಿಯಲಿ.*
*ಕಾಣಲಾರದ ಈ ಗಾಳಿ, ಸೂರ್ಯಚಂದ್ರ ನಕ್ಷತ್ರಗಳ,*
*ಉದಯದ ಪ್ರತೀಹಾರಿ; ಪವಾಡ ಸದೃಶ ಪ್ರವಾಹವಿದು*
*ಸಹಸ್ರ ದಶಲಕ್ಷ ಜೀವಿಗಳನು; ಮಣ್ಣಿನೊಳಗಟ್ಟುತಿದೆ.*
*ಇನ್ನೂ ಅಧಿಕ ಜೀವಿಗಳುದಯ ಸಾರುತಿದೆ.*
*ಚಿರಯೌವ್ವನದೀ ವೃದ್ಧ, ಉರುಳಿಸಿ ಗುಡಿಸುತಲಿಹನು,*
*ಅಡೆತಡೆಗಳಿಲ್ಲದೆಯೆ, ಮಾನವ ಮೆದುಳಿನ*
*ಮುತ್ತುಗಳಂತಿಹ,*
*ಮಹಾನಾಗರಿಕತೆಗಳನು, ನೀಲಗಗನಚುಂಬಿ*
*ನಿರ್ಮಾಣಗಳನು.*

*ಅವನ ಕಸದ ಬುಟ್ಟಿ ಇರುವುದೆಲ್ಲಿ?*
*ಗೊತ್ತಿರುವುದಾರಿಗೆ? ನಿಮಗೆ ಗೊತ್ತಾದತಕ್ಷಣ.*
*ಕ್ಷಣಗಳ ಪ್ರವಾಹ, ಬತ್ತಿ ನಿಂತು ಬಿಡುತಲಿದೆ;*
*ಕಾಲರಹಿತ ಕಾಲವನು, ಲೆಕ್ಕಿಸಲಾಗದ ಪೂರ್ಣತ್ವವನು,*
*ದೇವತ್ವವನು, ಹಿಂದಿರಿಸಿ.*

(ಮೂಲ ಆಂಗ್ಲಭಾಷೆಯಲ್ಲಿ ಪರಮಪೂಜ್ಯ ಸಿದ್ದೇಶ್ವರ ಸ್ವಾಮಿಗಳು, ಜ್ಞಾನ ಯೋಗಾಶ್ರಮ ಬಿಜಾಪುರ.
ಅನುವಾದಕರು: ಡಾ॥ ವ್ಹಿ.ವ್ಹಿ. ಬಾಗಲಕೋಟಿ, 'ವಿಶ್ವಚೇತನ' ಕಲ್ಯಾಣ ಕಾಲನಿ, ಗೋಕಾಕ-591307. ದೂ.226460.)

**ಇ) ವಚದಲ್ಲಿ ತುಲಾಯಂತ್ರದ ಹಾಗೂ ಸಮತೋಲದ ಪರಿಕಲ್ಪನೆ:**

ಮೂಲಭೌತಪರಿಮಾಣಗಳಲ್ಲಿ ಒಂದಾದ ದ್ರವ್ಯರಾಶಿ (Mass)ಯ ಮಾಪನವನ್ನು ತುಲಾಯಂತ್ರ (ತಕ್ಕಡಿ) ದಿಂದ ಮಾಡುತ್ತೇವೆ. ಅದರಲ್ಲಿ ಒಂದು ದ್ರವ್ಯರಾಶಿಯನ್ನು, ಗೊತ್ತಿದ್ದ ದ್ರವ್ಯರಾಶಿಯನ್ನು ಹೊಂದಿದ ಮತ್ತೊಂದು ವಸ್ತು(ತೂಕದ ಕಲ್ಲು)ವಿನೊಡನೆ ತುಲಾಯಂತ್ರದಲ್ಲಿ ಸಮದೂಗಿಸಿ, ವಸ್ತುವಿನ(ಗೊತ್ತಿಲ್ಲದ) ದ್ರವ್ಯರಾಶಿಯನ್ನು ಸ್ಟ್ಯಾಂಡರ್ಡ್ ಏಕಮಾನ(ಕಿಲೋಗ್ರಾಮ್, ಗ್ರ್ಯಾಮ್)ಗಳಲ್ಲಿ ಕಂಡು ಹಿಡಿಯುತ್ತೇವೆ. ಉಪಕರಣವು ತುಲಾಯಂತ್ರವಾದರೆ ಕಂಡು ಹಿಡಿಯುವ ವಿಧಾನವು ಸಮತೋಲನ ವಿಧಾನ. ಇದೇ ಉಪಕರಣ ಮತ್ತು ವಿಧಾನವನ್ನು ಉದಾಹರಣೆಗಳಾಗಿ ಬಸವಣ್ಣನವರು ತಮ್ಮ ವಚನವೊಂದರಲ್ಲಿ, ಬೇರೊಂದು ಸಂದರ್ಭಗಳಲ್ಲಿ ಭಾವಗಳ ಬಗ್ಗೆ ಹೇಳುವಾಗ ಯುಪಯೋಗಿಸಿದ್ದುಂಟು.

*ಧರಣಿಯ ಮೇಲೊಂದು ಹಿರಿದಿಪ್ಪ ಅಂಗಡಿಯನಿಕ್ಕಿ,*
*ಹರದ ಕುಳ್ಳಿರ್ದ ನಮ್ಮ ಮಹಾದೇವಸೆಟ್ಟಿ;*
*ಒಮ್ಮನವಾದಡೆ ಒಡನೆ ನುಡಿವನು,*
*ಇಮ್ಮನವಾದಡೆ ನುಡಿಯನು,*
*ಕಾಣಿಯ ಸೋಲ ಅರ್ಧಗಾಣಿಯ ಗೆಲ್ಲ,*
*ಜಾಣ ನೋಡವ್ವಾ ನಮ್ಮ ಕೂಡಲಸಂಗಮದೇವ.*

ದೇವನು ಪ್ರಸನ್ನಗೊಂಡು ನುಡಿಯುವಿಕೆಯು, ಭಕ್ತನ ವಿಶ್ವಾಸ, ಇಲ್ಲವೇ ಶ್ರದ್ಧೆ ಭಕ್ತಿಗಳ ಭಾರವನ್ನವಲಂಭಿಸಿದೆ. ಅವುಗಳ ಕೊರತೆಯಾದರೆ ದೇವನ ಒಲವು ಜಾಗೃತವಾಗಿ ಪ್ರಸನ್ನತೆ ದೊರೆಯಲಾರದು. ದೇವನ ತಕ್ಕಡಿಯಲ್ಲಿ ಭಕ್ತನ ಶ್ರದ್ಧೆ ಭಕ್ತಿಗಳು ಒಂದು ಕಡೆಯಾದರೆ, ಅವನ ಪ್ರಸನ್ನತೆ ಇನ್ನೊಂದು ಕಡೆ. ಇವುಗಳ ನಡುವಿನ ಸಮತೂಕದ ಪರಿಕಲ್ಪನೆ ವಚನದಲ್ಲಿದೆ. ಭಕ್ತಿಯ ಕೊರತೆ ಇದ್ದಲ್ಲಿ ದೇವನ ಪ್ರಸನ್ನತೆ ಬಯಸುವುದು ವ್ಯರ್ಥವೆಂಬುದು ವಚನದಲ್ಲಿ ಸ್ಪಷ್ಟಪಡಿಸಲ್ಪಟ್ಟಿದೆ. ಇಂತಹ ವಿಚಾರವನ್ನು ಇನ್ನೊಂದು ವಚನದಲ್ಲಿ 'ನಂಬಿ ಕರೆದರೆ ಓ ಎನ್ನನೇ ಶಿವನು' ಎಂದಿದ್ದಾರೆ. ಬಸವಣ್ಣನವರ ವಚನದ ಉತ್ತರಾರ್ಧದಲ್ಲಿ ಎರಡು ವಿಭಿನ್ನ ಭಾವಗಳಾದ ಭಕ್ತನ ಶ್ರದ್ಧೆ ಹಾಗೂ ದೇವನ ಒಲುಮೆ ಇವುಗಳ ಸಮತೋಲನ ವಿಷಯದಲ್ಲಿ ವೈಜ್ಞಾನಿಕತೆ ಕಾಣಸಿಗುವುದು. *

**'ಸಿದ್ಧಗಂಗಾ ಆಜೀವ ಸದಸ್ಯರಲ್ಲಿ ಮನವಿ**

ನಿಮ್ಮ ವಿಳಾಸ ಬದಲಾದಾಗ ವಿಳಾಸದಲ್ಲಿರುವ ನಂಬರ್ ತಪ್ಪದೆ ಸೂಚಿಸಿ. ಈ ಕೆಳಗಿನ ವಿಳಾಸಕ್ಕೆ ಪತ್ರ ಬರೆಯಿರಿ.

ಈ ನಂಬರ್ ಪ್ರತಿಗಳನ್ನು ರವಾನಿಸುವ ಕವರ್ ಮೇಲೆ ಇರುವ ನಿಮ್ಮ ವಿಳಾಸದಲ್ಲಿರುವುದು. ಈ ನಂಬರ್ ಸ್ಥಿರ ನೆನಪಿನಲ್ಲಿಡಿ.

**ಪ್ರಕಾಶಕರು,**
ಸಿದ್ಧಗಂಗಾ ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು- 572 104.

# ಶರಣರು ಮತ್ತು ಸಮಾಜವಾದ

– ಯು.ಎನ್. ಸಂಗನಾಳಮಠ, ರಾಜ್ಯಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪ.ಪೂ. ಕಾಲೇಜು, ಹೊನ್ನಾಳಿ, ದಾವಣಗೆರೆ.

ಇಂದು ಪ್ರಚಲಿತವಾಗಿರುವ ಪ್ರಜಾಪ್ರಭುತ್ವ, ಸಮಾಜವಾದ ಇತ್ಯಾದಿ ಪರಿಕಲ್ಪನೆಗಳು ಅತ್ಯಂತ ಆಧುನಿಕವೂ ಅಲ್ಲ, ಹೊಸವೂ ಅಲ್ಲ. ಇವೆಲ್ಲ ಹಿಂದಿನ ಕಾಲದಲ್ಲಿ ಇದ್ದವು ಎಂಬ ವಿಚಾರವನ್ನು ಹಲವಾರು ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಶರಣರ ನಡೆ-ನುಡಿಗಳನ್ನು ಅವರು ವ್ಯಕ್ತಪಡಿಸಿದ ವಚನ ಸಾಹಿತ್ಯದ ಮೂಲಕ ಅವಲೋಕಿಸಿದಾಗ ಸಮಾಜವಾದದ ಅಂಶಗಳನ್ನು ಗುರುತಿಸಿ ವಿಶ್ಲೇಷಿಸುವ ಪ್ರಯತ್ನ ಇದಾಗಿದೆ.

ಹನ್ನೆರಡನೆಯ ಶತಮಾನದಲ್ಲಿ ನಿರ್ಮಾಣವಾದ ಸಾಮಾಜಿಕ ವಾತಾವರಣಕ್ಕೂ ವಚನಗಳ ವಸ್ತುವಿಗೂ ತಾರ್ಕಿಕ ಸಂಬಂಧವಿದೆ. ವಚನಗಳು ಪ್ರಸ್ತುತ ಕಾಲದತ್ತ, ವಚನಕಾರನ ಅನುಭವದತ್ತ ನೋಡುತ್ತವೆ. ವಿಚಾರಗಳ ಮುಖಾಂತರ ಜನರನ್ನು ಎಚ್ಚರಿಸುತ್ತವೆ. ಈ ಅವಧಿಯಲ್ಲಿ ೩೫೦ಕ್ಕೂ ಮೇಲ್ಪಟ್ಟು ವಚನಕಾರರು ಅದರಲ್ಲಿ ಮೂವತ್ತಕ್ಕೂ ಹೆಚ್ಚು ಸ್ತ್ರೀಯರು ತಮ್ಮ ವಚನಗಳ ಮುಖಾಂತರ ತಮ್ಮ ಅನುಭವ ಆಲೋಚನೆ ಮಾಧ್ಯಮಗಳಿಂದ ಸಮಾಜದ ಎಲ್ಲ ಸ್ತರಗಳನ್ನು ಎಚ್ಚರಿಸಿದರು. ಶರಣರ ಕ್ರಾಂತಿಯು ಒಬ್ಬರಿಂದ ಆರಂಭವಾಗದೇ ಎಲ್ಲರಿಂದಲೂ ಆರಂಭವಾಗಿ ಸಮಷ್ಟಿಯೇ ಕಾರ್ಯಾಲೋಚನೆಯಲ್ಲಿ ತೊಡಗಿದ್ದುದು ಒಂದು ವಿಶಿಷ್ಟತೆ. ಹೀಗಾಗಿ ಶರಣ ಕ್ರಾಂತಿಯು ವ್ಯಷ್ಟಿ ಮೂಲದ್ದಾಗದೇ ಸಮಷ್ಟಿ ಮೂಲದ್ದು. ಡಾ॥ ಚಿದಾನಂದ ಮೂರ್ತಿಯವರ ಪ್ರಕಾರ ಆಗಿನ ಕ್ರಾಂತಿ ಬಸವಣ್ಣ ಒಬ್ಬನಿಂದ ಆಯಿತು ಎನ್ನುವುದು ತಪ್ಪು. ಆದರೆ ಬಸವಣ್ಣ ನಾಯಕ ಕೇಂದ್ರ ಬಿಂದು. ಅನುಭಾವಿ ಅಲ್ಲಮಪ್ರಭು, ಸಮಾಜ ಕಾರ್ಯಕರ್ತ ಸಿದ್ಧರಾಮ, ಕುಶಾಗ್ರಮತಿ ಚನ್ನಬಸವಣ್ಣ, ಹರಿತ ನಾಲಿಗೆಯ ಚೌಡಯ್ಯ, ದಿಟ್ಟ ವಿರಾಗಿಣಿ ಅಕ್ಕಮಹಾದೇವಿ, ಬುದ್ಧಿಜೀವಿ ಮುಕ್ತಾಯಕ್ಕ ಇಂಥ ಹಲವರು ಒಂದುಗೂಡಿದಾಗ ಸಾಧ್ಯವಾಯಿತು. ಬಸವಣ್ಣ ತನ್ನ ಸಂಘವನ್ನು ಚಾತುರ್ಯ, ಅಧಿಕಾರಬಲ ಉದಾತ್ತ ಉದ್ದೇಶಗಳಿಂದ ತನ್ನಂತೆ ಯೋಚಿಸುವವರನ್ನು ಒಂದುಗೂಡಿಸಲು ಸಾಧ್ಯವಾಯಿತು. ಗಾಂಧಿ ನಮಗೆ ಸ್ವಾತಂತ್ರ್ಯ ತಂದುಕೊಟ್ಟವರು ಎಂಬ ಮಾತನ್ನು ಎಷ್ಟು ವೈಚಾರಿಕವಾಗಿ ಸ್ವೀಕರಿಸುವೆವೊ ಹಾಗೆ ಬಸವಣ್ಣನಿಂದ ಆಂದೋಲನ ನಡೆಯಿತು ಎಂಬುದನ್ನು ಸ್ವೀಕರಿಸಬೇಕು.

ಸಮಾಜದ ಪ್ರಗತಿಪರ ವಿಚಾರದ ಎಲ್ಲ ವರ್ಗ, ವರ್ಣ, ಲಿಂಗಗಳ ಮೇಲು-ಕೀಳು ಎನ್ನದೇ ಒಂದೆಡೆ ಸೇರಿ ವಾದ-ವಿವಾದ, ಚರ್ಚೆ-ಪ್ರತಿಚರ್ಚೆ ನಡೆಸಿ ಸಾಮೂಹಿಕ ನಿರ್ಣಯಗಳನ್ನು ಕೈಗೊಳ್ಳುತ್ತಿದ್ದರೆಂಬುದನ್ನು ಸ್ವೀಕರಿಸಬೇಕು. ಹೀಗೆ ಆಗಿನ ಕಾಲದಲ್ಲಿ ಅನುಭವ ಮಂಟಪ ಒಂದು ಸಾಮಾಜಿಕ ಚರ್ಚೆಯ ವೇದಿಕೆಯಾಗಿತ್ತು. ಅನುಭವಿಗಳ ಚರ್ಚಾ ಮಂಟಪವೇ ಅನುಭವ ಮಂಟಪ. ಪ್ರಗತಿಪರ ವಿಚಾರಗಳು ಚರ್ಚೆ ಮೂಲಕ ನಿರ್ಣಯವಾಗುತ್ತಿದ್ದವು.

ಸಮಾಜವಾದದ ಮೂಲಸೂತ್ರವೇ ಸಮಾನತೆ. ಇದನ್ನು ಶರಣರು ಹೇರಲಿಲ್ಲ. ಅನುಷ್ಠಾನಕ್ಕೆ ತರಲು ಪ್ರಾಮಾಣಿಕ ಪ್ರಯತ್ನ ಮಾಡಿದರು. ಶರಣರು ಕಟ್ಟ ಬಯಸಿದ ಸಮಾಜದಲ್ಲಿ ಲಿಂಗ, ಜಾತಿ, ವರ್ಣ, ವರ್ಗ, ಕಸಬು, ಭೇದ ಕಾಣುವುದಿಲ್ಲ. ಅಷ್ಟೇಕೆ ಪ್ರಕೃತಿಯ ಭೌತ ವಸ್ತುಗಳಾದ ನೆಲ-ಜಲ, ತರು-ಲತೆ, ಪ್ರಾಣಿ-ಪಕ್ಷಿಗಳಲ್ಲಿ ಸಮಾನ ದೃಷ್ಟಿ ಕಂಡರೆಂಬುದು ತಿಳಿಯುತ್ತದೆ. ಯಾವ ತರಹದ ಶೋಷಣೆಗೂ ಆಸ್ಪದ ಕೊಟ್ಟಿದ್ದಿಲ್ಲ. ವರ್ಣ ಜಾರಿ ವ್ಯವಸ್ಥೆಯ ನಿರ್ಮೂಲನೆಗಾಗಿ ಬಸವಣ್ಣ ಎರಡು ಮಾರ್ಗ ಕಂಡುಕೊಂಡರು. ೧) ಸ್ಥಾವರವನ್ನು ನಿರಾಕರಿಸಿದ್ದು ಅಂದರೆ ಪುರೋಹಿತಶಾಹಿಗಳ ನಿಯಂತ್ರಣದಲ್ಲಿದ್ದ ದೇವಾಲಯಗಳಿಗೆ ಅಸ್ಪೃಶ್ಯರ ಪ್ರವೇಶವಿದ್ದಿಲ್ಲ. ಕೆಳಜಾತಿಯವರಿಗೆ ಪ್ರವೇಶ ದೊರಕಿಸಲು ಪ್ರಯತ್ನಿಸಿದರೆ ಘರ್ಷಣೆ ಸಂಭವಿಸಬಹುದೆಂದು ಸ್ಥಾವರ ದೇವಾಲಯವನ್ನು ನಿರಾಕರಿಸಿದರು. ೨) ಅದಕ್ಕಾಗಿ ಎಲ್ಲರಿಗೂ ಇಷ್ಟಲಿಂಗವನ್ನು ನೀಡಿ ದೇಹವೇ ದೇವಾಲಯ ಎಂದು ಹೇಳಿ 'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ' ಎಂದರು. ಅಸ್ಪೃಶ್ಯರಿಗೂ ಇಷ್ಟಲಿಂಗಕೊಟ್ಟು ಎಲ್ಲರೊಂದಿಗೆ ಸಮಾನಗೊಳಿಸಿ ಅವರಲ್ಲಿಯೂ ಆತ್ಮವಿಶ್ವಾಸ ಬೆಳೆಸಿದ ಕ್ರಮ ಅಪೂರ್ವವಾದದ್ದು.

ಶರಣರ ಸಮಾಜ ಸಮಾನತೆಯ ಸಮಾಜ, ಕಾಯಕ ಜೀವಿಗಳ ಸಮಾಜ, ಕಾಯಕಕ್ಕೆ ದಾಸೋಹದ ಚೌಕಟ್ಟಿದೆ. ಈ ದಾಸೋಹದ ಕಟ್ಟಳೆ ಇಲ್ಲದಿದ್ದರೆ ಸತ್ಕ್ರಿಯೆಯಿಂದ ಗಳಿಸಿದ ಹಣ ಸಂಗ್ರಹವಾದರೂ ಅಹಂ ಸೃಷ್ಟಿ ಮಾಡು





ವುದು ಆಗ ಮೇಲು-ಕೀಳಿನ ಅಸಮಾನತೆ ಕಂಡು ಬರುವುದು. ದಾಸೋಹ ಎಂದರೆ ದಾನವಲ್ಲ. ದಾಸೋಹವು ಕೊಡುವವನಲ್ಲಿ ವಿನಮ್ರ ಭಾವವನ್ನು, ಪಡೆದುಕೊಳ್ಳುವಲ್ಲಿ ಸಮಾತಾಭಾವನೆಯನ್ನು ಉಂಟು ಮಡುವುದು.

ಸೋಹಂ ಎಂದರೆ ಅಂತರಂಗದ ಗರ್ವ
ಶಿವೋಹಂ ಎಂದಡೆ ಬಹಿರಂಗದ ಗರ್ವ.
ಈ ಉಭಯವನುಳಿದು ದಾಸೋಹಂ ಭಾವವನೆ ಕರುಣಿಸಿ ಬದುಕಿಸಯ್ಯಾ ಅಖಂಡೇಶ್ವರಾ ಎನ್ನುವ ಷಣ್ಮುಖಸ್ವಾಮಿಯ ವಚನದಲ್ಲಿ ಪರಹಿತ ಸಾಧನೆಯ ಪರಿಶ್ರಮವೇ ದಾಸೋಹ.

ಜಾತಿ ವರ್ಗ ರಹಿತ ಸಮಾಜದ ಸಮಾನತೆಗೆ ಪೂರಕವಾಗಿ

*ಸೆಟ್ಟಿಯಂಬೆನೆ ಸಿರಿಯಾಳನ?*
*ಮಡಿವಾಳನೆಂಬೆನೆ ಮಾಚಯ್ಯನ ?*
*ಡೋಹರನೆಂಬೆನೆ ಕಕ್ಕಯ್ಯನ ?*
*ಮಾದಾರನೆಂಬೆನೆ ಚೆನ್ನಯ್ಯನ ?*
*ಆನು ಹಾರುವನೆಂದರೆ ಕೂಡಲಸಂಗಯ್ಯನ*
*ನಗುವನಯ್ಯ*

ಎಂದಿದ್ದಾರೆ ಬಸವಣ್ಣನವರು.

ದೇವರ ದಾಸಿಮಯ್ಯ ಸ್ತ್ರೀ ಪುರುಷ ಭೇದವಿಲ್ಲದ ಸಮಾಜದ ಬಗ್ಗೆ ಹೇಳುತ್ತ

*ಮೊಲೆ ಮೂಡಿ ಬಂದರೆ ಹೆಣ್ಣೆಂಬರು*
*ಗಡ್ಡ ಮೀಸೆ ಬಂದರೆ ಗಂಡೆಂಬರು*
*ಒಳಗೆ ಸುಳಿವಾತ್ಮ*
*ಗಂಡೂ ಅಲ್ಲ, ಹೆಣ್ಣು ಅಲ್ಲ*
*ಕಾಣಾ ರಾಮನಾಥ – ಎಂದಿದ್ದಾರೆ.*

ದುಡಿಯದೇ ತಿನ್ನಬಾರದು ಅನ್ಯಾಯದಿಂದ ಗಳಿಸಬಾರದು ನೇಮದಿಂದ ನೀಡಬೇಕು ಎನ್ನುವ ಸತ್ಯ ಶುದ್ಧ ಕಾಯಕದ ಮಹತ್ವವನ್ನು

*ಕಾಯಕದಲಿ ನಿರತನಾದರೆ ಗುರುದರ್ಶನ*
*ಮರೆಯಬೇಕು, ಲಿಂಗಪೂಜೆ ಮರೆಯಬೇಕು*
*ಜಂಗಮ ಮುಂದಿದ್ದರೂ ಹಂಗು ಹರಿಯಬೇಕು*
*ಕಾಯಕವೇ ಕೈಲಾಸವಾದ ಕಾರಣ*
*ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು*
*ಎಂದಿದ್ದಾರೆ ಆಯ್ದಕ್ಕಿ ಮಾರಯ್ಯ*

ಸತ್ಯಶುದ್ಧ ಕಾಯಕದಿಂದ ಬಂದ ದ್ರವ್ಯದಲ್ಲಿ ಚಿತ್ತ
*ವಿಚ್ಛಿಂದವಾಗದಿರಬೇಕು.*
*ನೇಮದ ಕೂಲಿ ಮುಂದಿನ ನಿತ್ಯ ನೇಮದಲಿ ಸಂದಿರಬೇಕು*
*ದ್ರವ್ಯವ ಹಿಡಿದರೆ ತಾ ಮಾಡುವ ಸೇವೆ ನಷ್ಟವಯ್ಯಾ*
*ಎಂಧಿದ್ದಾರೆ ನುಲಿಯ ಚಂದಯ್ಯ.*

ಸಾಮಾಜಿಕವಾಗಿ ಜಾತಿ ವರ್ಣ ಲಿಂಗ ಭೇದ ಎಣಿಸದ, ಆರ್ಥಿಕವಾಗಿ ಕಾಯಕ ತತ್ತ್ವದ ತಿರುಳಾದ ದುಡಿಮೆಯು ಎಲ್ಲರ ಹಕ್ಕು ಮತ್ತು ಹೊಣೆಗಾರಿಕೆ ಎಂಬುದನ್ನು; ಮತ್ತು ಸತ್ಯ ಶುದ್ಧ ಕಾಯಕದಿಂದ ಸಂಗ್ರಹವಾದುದನ್ನು ದಾಸೋಹದ ಮೂಲಕ ಜನರಿಗೆ ಹಂಚಬೇಕೆಂಬ ವಿಚಾರವನ್ನು; ಭವಿಗಳ ಮನಸ್ಸನ್ನು ಪರಿವರ್ತಿಸಿ, ಮಾಡುವ ಪ್ರಕ್ರಿಯೆಯನ್ನು; ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ತತ್ವವನ್ನು; ಸಮಗ್ರವಾಗಿ ಆಂತರ್ಯದ ದೃಷ್ಟಿಯಿಂದ ನೋಡಿದಾಗ ವಿಚಾರ ಮಾಡಿದಾಗ ಶರಣರ ಸಮಾಜವಾದದ ಅರ್ಥ ಉಂಟಾಗುತ್ತದೆ. *

ವಿಚಾರ

# ವಚನ ಸಾಹಿತ್ಯದ ಪ್ರಸ್ತುತತೆ

– ಡಾ॥ ನೀಲಮ್ಮ ಕತ್ನಳ್ಳಿ, ಪ್ರಾಂಶುಪಾಲರು, ಎಸ್.ಎಸ್.ಮರಗೋಳ ಮಹಾವಿದ್ಯಾಲಯ, ಶಹಾಬಾದ- 585 228.

ಪ್ರಸ್ತುತ ದಿನಮಾನಗಳಲ್ಲಿ ಮಾನವನ ಬದುಕು ಕ್ಷಣ ಕ್ಷಣಕ್ಕೂ ಅವನತಿಯತ್ತ ಸಾಗುತ್ತಿದೆ. ಸತ್ಯ-ಧರ್ಮ-ಅಹಿಂಸೆಗೆ ಹೆಸರಾದ ನಮ್ಮ ದೇಶದಲ್ಲಿಯೇ ಹಿಂಸೆ ತಾಂಡವವಾಡುತ್ತಿದೆ. ಪ್ರತಿ ಹಂತದಲ್ಲಿಯೂ ನಮ್ಮ ಸಂಸ್ಕೃತಿಯ ಅಧಃಪತನ ವಾಗುತ್ತಿದೆ. ಮಾನವ ಮೇಲ್ನೋಟಕ್ಕೆ ಸುಖಿಯಾಗಿರುವಂತೆ ಕಂಡರೂ, ಆಂತರಿಕ ವಾಗಿ ಅಸುಖಿಯಾಗಿದ್ದಾನೆ. ದುಶ್ಚಟ, ದುರ್ವ್ಯಸನಗಳ ದಾಸನಾಗಿ, ಮಾನಸಿಕ ಶಾಂತಿ-ನೆಮ್ಮದಿ ಗಳನ್ನು ಕಳೆದುಕೊಳ್ಳುತ್ತಿದ್ದಾನೆ.

ನಿಜವಾದ ಸಂತೋಷ ಬಾಹ್ಯ ವಸ್ತುಗಳಿಂದ ದೊರೆ ಯುವುದಿಲ್ಲ. ಅದು ನೆಲೆಗೊಳ್ಳುವುದು ಅಂತರಂಗದ ಶುದ್ಧ ನಡವಳಿಕೆಯಿಂದ. ಆಂತರಂಗಶುದ್ಧಿ ಅಪರೂಪ ವಾಗು ತ್ತಿರುವ ಇಂದಿನ ದಿನಮಾನಗಳಲ್ಲಿ ಮಾನವ ಒಂದರ್ಥದಲ್ಲಿ ಮಾನಸಿಕ ರೋಗಿಯಾಗಿರುತ್ತಾನೆ.

ಸಮಕಾಲೀನ ಸಮಾಜದಲ್ಲಿ ಬದುಕುತ್ತಿರುವ ಮಾನವನ ನೋವುಗಳಿಗೆ ಲೆಕ್ಕವಿಲ್ಲ. ಆತ ಎದುರಿಸುತ್ತಿರುವ ಸಮಸ್ಯೆಗಳೂ ವೈವಿಧ್ಯಮಯ. ಅಲ್ಲದೇ ಜೀವನ ಮೌಲ್ಯ ಗಳ ಕುಸಿತವೇ ಎಲ್ಲೆಡೆ ವಿಜೃಂಭಿಸುತ್ತಿರುವಾಗ ಎಲ್ಲಾ ದರೊಬ್ಬ ಆದರ್ಶವ್ಯಕ್ತಿ, ಮೌಲ್ಯಗಳನ್ನೇ ನಂಬಿ ಬದುಕು ಸಾಗಿರುವುದು ಅಸಾಧ್ಯ! ಎನ್ನುವ ವಾತಾವರಣ ಸೃಷ್ಟಿ ಮುಗಿದೆ. ಸತ್ಯವಂತರ ಕಾಲವಿದಲ್ಲ! ಎಂಬ ಕಹಿ ಅನುಭವ.

ಹನ್ನೆರಡನೆಯ ಶತಮಾನದಲ್ಲಿ ಇಂಥ ಸಮಸ್ಯೆಗಳು ಇರಲಿಲ್ಲವೆಂದಲ್ಲ. ಇಂದಿಗಿಂತ ಹೆಚ್ಚಿನ ಸಮಸ್ಯೆಗಳು ಅವರ ಕಣ್ಮುಂದಿದ್ದವು. ಆದರೆ ಬಸವಾದಿ ಶರಣರು, ಆ ಸಮಸ್ಯೆ ಗಳಿಗೆ ಸ್ಪಂದಿಸಿದ ರೀತಿ, ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸಿದ ವಿಧಾನ ವಿಸ್ಮಯಕಾರಿಯಾಗಿತ್ತು. ಅವರು ಸಮಸ್ಯೆಗಳನ್ನು ಪರಿಹರಿಸಲು ಬುದ್ಧಿಯ ಜೊತೆಗೆ ಹೃದಯದ ಬಳಕೆ ಮಾಡಿಕೊಂಡರು. ಆತ್ಮಬಲವನ್ನು ಮೈಗೂಡಿಸಿ ಕೊಂಡು, ವಿದೇಶದಿಂದ ಸಮಸ್ಯೆಗಳನ್ನು ಪರಿಪರಿಸಿಕೊಂಡರು. ಹೀಗಾಗಿ ಅವರ ಅನುಭವದಿಂದ ಮೂಡಿಬಂದ ವಚನ ಸಾಹಿತ್ಯ ಸಮಕಾಲೀನವಾಗುವುದರೊಂದಿಗೆ, ಸಾರ್ವ ಕಾಲಿಕವೂ ಆಗಿ ಬಿಡುತ್ತದೆ.

ನಾವಿಂದು ಬಸವಾದಿ ಶರಣರ ತತ್ವಕ್ಕೆ ತದ್ವಿರುದ್ಧವಾಗಿ ವಾತಾವರಣದಲ್ಲಿ ಬದುಕುತ್ತಿದ್ದೇವೆ. ಗುಡಿ-ಗುಂಡಾರಗಳನ್ನು ಕಟ್ಟುವುದರಲ್ಲಿ- ಕೆಡಹುವುದರಲ್ಲಿ ನಿರತ ರಾಗಿದ್ದೇವೆ. ದೇವರು-ಧರ್ಮದ ಹೆಸರಲ್ಲಿ ಅಶಾಂತಿ-ಕೊಲೆ-ರಕ್ತಪಾತ ನಡೆದಿದೆ. ಯಜ್ಞ-ಯಾಗ-ಪಶುಬಲಿ ಮುಂದುವರೆದಿದೆ.

ಅಧಿಕಾರಶಾಹಿ, ಭ್ರಷ್ಟರಾಜಕಾರಣ, ಜಾತಿ ವೈಷಮ್ಯಗಳು, ನಮ್ಮ ಸಾಮಾಜಿಕ ಪರಿಸರವನ್ನು ಮಲಿನಗೊಳಿಸಿವೆ. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ನಮ್ಮ ನೂರಾರು ಸಮಸ್ಯೆಗಳಿಗೆ ಪರಿಹಾರ, ಬಸವಾದಿ ಶರಣರ ಆದರ್ಶಗಳ ಪಾಲನೆಯಲ್ಲಿ ಮಾತ್ರ ಸಿಗಲು ಸಾಧ್ಯ! ಎಂದು ಹೇಳಿದರೆ ತಪ್ಪಾಗದು.

ಇಂದಿನ ಬಡತನ- ನಿರುದ್ಯೋಗ ಸಮಸ್ಯೆಗಳಿಗೆ ಪರಿಹಾರ ಶರಣರ ಕಾಯಕ ದಾಸೋಹ ತತ್ವಗಳಲ್ಲಿದೆ. ಇಂದಿನ ಮತೀಯ ಸಂಘರ್ಷಕ್ಕೂ, ಗುಡಿ-ಗುಂಡಾರಗಳ ಹೆಸರಲ್ಲಿ ನಡೆದಿರುವ ಹಿಂಸಾಕೃತ್ಯಕ್ಕೂ ಪರಿಹಾರ ಶರಣರ ತತ್ವಗಳಲ್ಲಿಯೇ ಇದೆ. ಜೀವಂತ ದೇವಾಲಯಗಳಿಂತಿದ್ದ ನಮ್ಮ ಬಡ ಬಂಧುಗಳ ಕಡೆಗೆ ಲಕ್ಷ್ಯ ಕೊಡುವುದು ಮುಖ್ಯವಾಗಬೇಕು.

ಇನ್ನು ಮಹಾತ್ಮರ ಮೂರ್ತಿ ಪ್ರತಿಷ್ಠಾಪನೆಗಳೂ ಅರ್ಥ ಕಳೆದುಕೊಳ್ಳುತ್ತಿವೆ. ಆ ಮಹಾತ್ಮರ ಬಗ್ಗೆ ನಿಜವಾದ ಗೌರವ ನಮಗಿದ್ದರೆ, ಅವರಿಗೆ ನಮ್ಮ ಹೃದಯದಲ್ಲಿ ಸ್ಥಾನಕೊಟ್ಟು, ಅವರ ಆದರ್ಶಗಳನ್ನು ಆಚರಣೆಯಲ್ಲಿ ತರುವುದರ ಮೂಲಕ ಅವರಿಗೆ ಅರ್ಥಪೂರ್ಣವಾದ ಗೌರವ ಸಲ್ಲಿಸಬಹುದಾಗಿದೆ.

ಇತ್ತೀಚೆಗೆ ಮಾನವ ಸಂಬಂಧಗಳು ಕಡಿದು ಹೋಗುತ್ತಿವೆ. ಮೌಲ್ಯಗಳು ನಶಿಸಿ ಹೋಗುತ್ತಿವೆ. ಇದನ್ನು ತಡೆದು ಸಂಬಂಧ ಕುದುರಿಸುವ ಮಾನವೀಯ ಮೌಲ್ಯ ಗಳನ್ನು ಬೆಳೆಸುವ ನಿಟ್ಟಿನಲ್ಲಿ ನಾವು ಸಾಗಬೇಕಾಗಿದೆ.

ಈ ಕತ್ತಲೆ ತುಂಬಿದ ಬದುಕಿನಲ್ಲಿ, ಶರಣ ಸಾಹಿತ್ಯ ಬೆಳಕು ನೀಡಿ, ಮಾರ್ಗದರ್ಶಿಯಾಗಿ ಬರಬಲ್ಲದು. ಜಾತಿ-ವರ್ಗದ ಗೋಡೆಗಳನ್ನು ತೆಗೆದು ಹಾಕಿದಾಗಲೇ, ಸಂಪದ್ಭರಿತ ಸಮಾಜ ನಿರ್ಮಾಣ ಸಾಧ್ಯ! ಶರಣ ಸಾಹಿತ್ಯದ ಈ ಸಂದೇಶವನ್ನು ಮನೆಮನೆಗೆ ತಲುಪಿಸುವ ಕೆಲಸ ನಡೆಯ ಬೇಕಾಗಿದೆ.

ಎಲ್ಲ ಧರ್ಮಗಳ ಗುರಿ ಪ್ರೇಮ! ವಿಶ್ವಪ್ರೇಮ! ಎಲ್ಲರೂ ಇದನ್ನೇ ಸಾರಿದ್ದಾರೆ.

'ಇವನಾರವ ! ಇವನಾರವ ! ಇವನಾರವ ! ಎನ್ನದೇ ಇವನಮ್ಮವ ! ಇವನಮ್ಮವ ! ಇವನಮ್ಮವ ಎಂದು ಎಲ್ಲರೂ ಒಗ್ಗಟ್ಟಾಗಿ! ಪ್ರೀತಿಸಿ! ಪ್ರೀತಿಯಿಂದ ಎಂಥ ಭಯೋತ್ಪಾದಕರನ್ನೂ ಪರಿವರ್ತಿಸಬಹುದು.

*



ಸಾಂದರ್ಭಿಕ

# ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ

–ಎಚ್.ಎಸ್. ಸಿದ್ಧಗಂಗಪ್ಪ, ನಂ. 53/1, ಶಿವಕೃಪ, 3ನೇ ಅಡ್ಡರಸ್ತೆ, ಕಾವೇರಿ ಬಡಾವಣೆ, ವಿಜಯನಗರ, ಬೆಂಗಳೂರು.

ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಕರ್ನಾಟಕದ ಕೊಡುಗೆ ಅಪೂರ್ವವಾದದ್ದು. ಸದಾ ಸ್ಮರಿಸುವಂತಹುದು. ವ್ಯಾಪಾರಕ್ಕಾಗಿ ಭಾರತಕ್ಕೆ ಬಂದ ಬ್ರಿಟಿಷರು ಇಲ್ಲಿನವರ ಸ್ವಾರ್ಥತೆ ಒಳಜಗಳವನ್ನು ಅರ್ಥಮಾಡಿಕೊಂಡು ಒಡೆದು ಆಳುವ ನೀತಿಯನ್ನು ಅನುಸರಿಸಿ ಆಡಳಿತ ಸೂತ್ರವನ್ನು ತಮ್ಮದಾಗಿಸಿಕೊಂಡರು.

ಬ್ರಿಟಿಷರ ದಬ್ಬಾಳಿಕೆ, ಅನ್ಯಾಯದ ವಿರುದ್ಧ ಸಿಡಿದೆದ್ದ ರಾಷ್ಟ್ರಪ್ರೇಮಿಗಳು ತಮ್ಮ ತಾಯ್ನಾಡಿನ ರಕ್ಷಣೆಗಾಗಿ ಗುಲಾಮಗಿರಿಯಿಂದ ಹೊರಬರಲು ಹೋರಾಟದ ಭೂಮಿಕೆ ಯನ್ನು ಸಿದ್ಧಪಡಿಸಿದರು. ಈ ನಿಟ್ಟಿನಲ್ಲಿ ಕರ್ನಾಟಕ ದಲ್ಲಿ ಸ್ವಾತಂತ್ರ್ಯ ಹೋರಾಟದ ಕಿಡಿಗಳನ್ನು ಸಿಡಿಸಿದರು. ಸಾವಿರಾರು ಜನ ದೇಶಕ್ಕಾಗಿ ತಮ್ಮನ್ನು ಅರ್ಪಿಸಿಕೊಂಡರು.

ಕರ್ನಾಟಕವನ್ನು ತಮ್ಮ ಅಧೀನದಲ್ಲಿಟ್ಟುಕೊಳ್ಳಬೇಕೆಂಬ ಬ್ರಿಟಿಷರ ಬಯಕೆ ಟಿಪ್ಪುವಿನ ಪೌರುಷದ ಮುಂದೆ ಈಡೇರಲಿಲ್ಲ. ಟಿಪ್ಪುವಿನ ಮರಣಾನಂತರ ರಾಜ್ಯ ಅವರಿಗೆ ಸುಲಭವಾಗಿ ದಕ್ಕಲಿಲ್ಲ. ಟಿಪ್ಪು ಮಡಿದ ನಂತರ ಅವನ ಸೈನ್ಯದಲ್ಲೇ ಸರದಾರನಾಗಿದ್ದ ಧೋಂಡೋಜಿ ವಾಘ ಎಂಬುವನು 1800ರಲ್ಲಿ ಬ್ರಿಟಿಷರ ವಿರುದ್ಧ ದಂಗೆಯೆದ್ದ, ನಂತರ ಅವನು ಆರ್ಥರ್ ವೆಲ್ಲೆಸ್ಲಿಯ ಸೈನ್ಯದೊಡನೆ ಕೋನಗಲ್‌ನಲ್ಲಿ ಯುದ್ಧ ಮಾಡುವಾಗ ಪ್ರಾಣತ್ಯಾಗ ಮಾಡಿದ. ಕರ್ನಾಟಕದಲ್ಲಿ ಬ್ರಿಟಿಷರನ್ನು ಎದುರಿಸಿ ಮೊದಲು ದಂಗೆಯೆದ್ದ ಕೀರ್ತಿ ನಿಜಾಮ ರಾಜ್ಯದ ಕೊಪ್ಪಳದ ವೀರಪ್ಪ ಅವರಿಗೆ ಸಲ್ಲಬೇಕು.

ಕರ್ನಾಟಕದ ಸ್ವಾತಂತ್ರ್ಯ ಇತಿಹಾಸಲ್ಲಿ ಕಿತ್ತೂರ ಚೆನ್ನಮ್ಮನ ಹೆಸರು ಹಚ್ಚ ಹಸಿರು. ಚೆನ್ನಮ್ಮನ ಸ್ವಾತಂತ್ರ್ಯದ ಕಿಚ್ಚು, ಅಪರಿಮಿತವಾದ ದೇಶಪ್ರೇಮ, ಅಪ್ರತಿಮ ಹೋರಾಟ, ಸ್ವಾತಂತ್ರ್ಯ ಹೋರಾಟಗಾರರಿಗೆ ಸ್ಫೂರ್ತಿಯ ಸೆಲೆ; ಉತ್ಸಾಹದ ಚಿಲುಮೆ, ಭಾರತದ ವೀರ ಮಹಿಳೆಯರಲ್ಲಿ ಚೆನ್ನಮ್ಮ ಧ್ರುವತಾರೆ. ಬ್ರಿಟಿಷರು ಕಿತ್ತೂರಿನಲ್ಲಿ ಆಡಳಿತದಲ್ಲಿ ಪ್ರವೇಶಿಸುವುದನ್ನು ಉಗ್ರವಾಗಿ ಪ್ರತಿಭಟಿಸಿ ಸಿಂಹಿಣಿಯಂತೆ ಕೆರಳಿ ಯುದ್ಧಕ್ಕೆ ನಿಂತ ವೀರಾಗ್ರಣಿ, ಆಕೆಯ ದಿಟ್ಟತನ ಪೌರುಷದ ಮುಂದೆ ಬ್ರಿಟಿಷರು ದಿಕ್ಕೆಟ್ಟರು. ಆನಂತರ ಭಾರಿ ಸೈನ್ಯದೊಡನೆ ಬಂದ ಬ್ರಿಟಿಷರು ಕಿತ್ತೂರು ಚೆನ್ನಮ್ಮ ನ್ನು ಸೆರೆ ಹಿಡಿದರು.

ವೀರಮಾತೆ ಕಿತ್ತೂರು ಚೆನ್ನಮ್ಮನಿಗೆ ದಾಸ್ಯಜೀವನ ಹಿಡಿಸ ಲಿಲ್ಲ. ಆಕೆ ಸ್ವಾತಂತ್ರ್ಯದೇವಿಯ ನೆನಪಿನಲ್ಲಿಯೇ ಪ್ರಾಣತ್ಯಾಗ ಮಾಡಿದಳು. ಆದರೆ ಸಾವಿನ ನಂತರವೂ ಆಕೆ ಹೊತ್ತಿಸಿದ ಬಂಡಾಯದ ಕಿಡಿ ಪ್ರಜ್ವಲಿಸಿತು. ಅದರ ಬೆಳಕಿನಲ್ಲಿ ಅನೇಕ ಜನ ವೀರರು ಸ್ವಾತಂತ್ರ್ಯ ಹೋರಾಟಕ್ಕೆ ತಮ್ಮನ್ನು ತೊಡಗಿಸಿ ಕೊಂಡರು. ಕಿತ್ತೂರು ಸೈನ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದ ಸಂಗೊಳ್ಳಿ ರಾಯಣ್ಣ ಸೈನ್ಯವನ್ನು ಕಟ್ಟಿಕೊಂಡು ಬ್ರಿಟಿಷರ ವಿರುದ್ಧ ದಂಗೆಯೆದ್ದ, ಬ್ರಿಟಿಷರಿಗೆ ಸಿಂಹಸ್ವಪ್ನವಾಗಿದ್ದ ಆತನನ್ನು ಕುತಂತ್ರದಿಂದ ಕೊಂದರು. ಇದೇ ಸಂದರ್ಭದಲ್ಲಿ ದಕ್ಷಿಣ ಮತ್ತು ಉತ್ತರ ಕನ್ನಡದ ರೈತರು ಬ್ರಿಟಿಷರ ವಿರುದ್ಧ ಬಂಡಾಯವೆದ್ದರು. ನಂತರ ಪಡೆದ ಸ್ವಾತಂತ್ರ್ಯ ಸಂಗ್ರಾಮ ದಲ್ಲಿ ಅಪರಂಪರಾನಂದ, ಕಲ್ಯಾಣಸ್ವಾಮಿ, ಪುಟ್ಟಬಸಪ್ಪ ಬಂಗಡಿ ರಾಜಕುಮಾರ್, ಲಿಂಗಪ್ಪ ಸರ್ದಾರ್ ಮೊದಲಾ ದವರು ಹೋರಾಟ ನಡೆಸಿ ಹುತಾತ್ಮರಾದರು.

19ನೆಯ ಶತಮಾನದ ಪ್ರಾರಂಭದಲ್ಲಿ ನಡೆದ ಬಿದನೂರು, ಐಗೂರು, ಸಿಂಧಗಿ ಬಂಡಾಯಗಳು, 1823–31ರ ಮಧ್ಯ ನಡೆದ ಕಿತ್ತೂರು ಸ್ವಾತಂತ್ರ್ಯ ಹೋರಾಟ ಹಾಗೂ ಕೊಡಗು ಮತ್ತು ಕೆನರಾ ಬಂಡಾಯಗಳು, ಮುಂದೆ ನಡೆದ ಸ್ವಾತಂತ್ರ್ಯ ಹೋರಾಟಕ್ಕೆ ಅಗತ್ಯವಾದ ಪರಿಸರ ನಿರ್ಮಾಣ ಮಾಡಿ ತೆಂದು ಹೇಳಬಹುದು.

ಹತ್ತೊಂಬತ್ತನೆಯ ಶತಮಾನದ ಪ್ರಾರಂಭದಲ್ಲಿ ನಡೆದ ಬಿದನೂರು, ಐಗೂರು, ಸಿಂಧಗಿ ಬಂಡಾಯಗಳು, ನಂತರ ನಡೆದ ಕಿತ್ತೂರು ಸ್ವಾತಂತ್ರ್ಯ ಹೋರಾಟ, ಕೊಡಗು ಹಾಗೂ ಕೆನರಾ ಬಂಡಾಯಗಳು ಮುಂದೆ ನಡೆದ ಸ್ವಾತಂತ್ರ್ಯ ಹೋರಾಟಕ್ಕೆ ಅಗತ್ಯವಾದ ಭೂಮಿಕೆಯನ್ನು ಸಿದ್ಧಮಾಡಿತು.

**ಸಿಪಾಯಿದಂಗೆ :**

ಭಾರತ ಸ್ವಾತಂತ್ರ್ಯ ಹೋರಾಟದ ಕಿಡಿ ಸಾರ್ವತ್ರಿಕ ಸ್ವರೂಪವನ್ನು ಪಡೆದುಕೊಂಡಿದ್ದು 1852ರಲ್ಲಿ ನಡೆದ ಸಿಪಾಯಿ ದಂಗೆಯಲ್ಲಿ, ಈ ದಂಗೆಯನ್ನು ಭಾರತದ ಪ್ರಥಮ ಸ್ವಾತಂತ್ರ್ಯ ಹೋರಾಟವೆಂದು ಕರೆಯುತ್ತೇವೆ. ಸುರಪುರ, ನರಗುಂದದ ರಾಜರು, ಹಲಗಲಿ, ಬೇಡರು, ಧಾರವಾಡದ ದೇಸಾಯಿಗಳು ಇವರೆಲ್ಲರೂ ಮುಂಡರಗಿ ಭೀಮರಾಯನ ನೇತೃತ್ವದಲ್ಲಿ ಬ್ರಿಟಿಷರ ವಿರುದ್ಧ ಹೋರಾಟ ನಡೆಸಿ ಪ್ರಾಣ ತ್ಯಾಗ ಮಾಡಿದರು. ಭೀಮರಾಯನ ಅಪ್ರತಿಮ ಹೋರಾಟ ಬ್ರಿಟಿಷರ ಗುಂಡಿಗೆಯನ್ನು ನಡುಗಿಸಿತು.

**ಅಸಹಕಾರ ಚಳುವಳಿ :**

ಭಾರತೀಯ ಕಾಂಗ್ರೆಸ್ಸಿನ ಹೋರಾಟ ದೇಶದಲ್ಲಿ ಗ್ರಾಮಾಂತರ ಪ್ರದೇಶಗಳಿಗೂ ಹಬ್ಬಿತು. ಇಡೀ ದೇಶವೇ ಹೋರಾಟದ ಕಣವಾಯಿತು. 1920ರಲ್ಲಿ ನಡೆದ ಅಸಹಕಾರ ಚಳುವಳಿಯಲ್ಲಿ ಭಾಗವಹಿಸಲು ಗಾಂಧೀಜಿಯವರು ಬೆಂಗಳೂರಿಗೆ ಬಂದಿದ್ದರು. ಅಸಹಕಾತ ಚಳುವಳಿಯಲ್ಲಿ ಶಾಲಾ ಕಾಲೇಜುಗಳು ಮುಚ್ಚಿದವು, ವಿದ್ಯಾರ್ಥಿಗಳು ಸಕ್ರಿಯವಾಗಿ ಚಳುವಳಿಯ ಕಣಕ್ಕಿಳಿದರು. ಕೃಷ್ಣರಾವ್ ಕರಿಗುಪ್ಪ, ನಾರಾಯಣರಾವ್ ಕರಿಗುಪ್ಪ, ನಾರಾಯಣರಾವ್ ಜೋಶಿ, ಶ್ರೀನಿವಾಸರಾವ್, ಜಯರಾವ್ ದೇಶಪಾಂಡೆ, ರಂಗರಾವ್ ತಿಲಿಗುಲ್, ಹನುಮಂತರಾವ್ ಕೌಜಲಗಿ, ಅನಂತರಾವ್ ಜಾಲಿಕಾರ, ವೆಂಕಟೇಶ್ ಕುಲಕರ್ಣಿ, ಕಾರ್ನಾಡ್ ಸದಾಶಿವರಾವ, ಕೆ.ಆರ್. ಕಾರಂತ್, ಆಲೂರು ವೆಂಕಟರಾವ್ ಮೊದಲಾದವರು ನ್ಯಾಯಾಲಯಗಳನ್ನು ಬಹಿಷ್ಕರಿಸಿದರು. ಮದ್ಯದಂಗಡಿ, ಪರದೇಶಿ ವಸ್ತ್ರದ ಅಂಗಡಿ ಪಿಕೆಟಿಂಗ್ ಎಲ್ಲೆಲ್ಲಿಯೂ ನಡೆಯಿತು. ಧಾರವಾಡದಲ್ಲಿ ಪೋಲೀಸರು ಅಸಹಕಾರಿ ಚಳುವಳಿಗಾರರ ಮೇಲೆ ವಿನಾಕಾರಣ ಗುಂಡ ಹಾರಿಸಿದರು. ಅನೇಕ ನಿರಪರಾಧಿಗಳ ಕಗ್ಗೊಲೆಯಾಯಿತು. ದಿವಾಕರ್, ಮೋಹರೆ, ಚೌಡನಾಯಕ, ತಿಮ್ಮಪ್ಪನಾಯಕ, ಗಂಗಾಧರರಾವ್ ದೇಶಪಾಂಡೆ ಅವರೂ ಸೇರಿದಂತೆ ನೂರಾರು ಚಳುವಳಿಗಾರರ ಬಂಧನವಾಯಿತು. ನಾಗಪುರದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನ ಹಾಗೂ ಧ್ವಜ ಸತ್ಯಾಗ್ರಹದಲ್ಲಿ ಕರ್ನಟಕದಿಂದ ಸಾವಿರಾರು ಜನ ಪ್ರತಿನಿಧಿಗಳು ಭಾಗವಹಿಸಿದ್ದರು.

**ಗಾಂಧಿ ಪ್ರಾಂತ :**

1924ರಲ್ಲಿ ಬೆಳಗಾವಿಯುಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷತೆಯನ್ನು ಗಾಂಧೀಜಿ ಅವರು ವಹಿಸಿದ್ದರು. ಈ ಅಧಿವೇಶನ ಕನ್ನಡಿಗರ ರಾಷ್ಟ್ರೀಯತ್ವಕ್ಕೆ ಸ್ಫೂರ್ತಿ, ಉತ್ಸಾಹ ದೊರೆಯಿತು. ಕರ್ನಾಟಕದವರು ಕಾಂಗ್ರೆಸ್ಸಿನ ಎಲ್ಲ ಕಾರ್ಯಕ್ರಮ ಹಾಗೂ ಹೋರಾಟಗಳಲ್ಲಿ ಸಕ್ರಿಯವಾಗಿ ಹಾಗೂ ಅಹಿಂಸಾತ್ಮಕವಾಗಿ ಭಾಗವಹಿಸುತ್ತಿದ್ದರಿಂದ ಕರ್ಣಾಟಕಕ್ಕೆ 'ಗಾಂಧಿ ಪ್ರಾಂತ' ವೆಂದೇ ಹೆಸರಾಯಿತು.

ಭಾರತ ಸ್ವಾತಂತ್ರ್ಯ ಹೋರಾಟದ ಕಿಡಿ ಸಾರ್ವತ್ರಿಕ ಸ್ವರೂಪ ಪಡೆದುಕೊಂಡಿದ್ದು 1857ರಲ್ಲಿ ನಡೆದ ಸಿಪಾಯಿ ದಂಗೆಯಲ್ಲಿ ಈ ದಂಗೆಯನ್ನು ಭಾರತದ ಪ್ರಥಮ ಸ್ವಾತಂತ್ರ್ಯ ಹೋರಾಟವೆಂದು ಕರೆಯುತ್ತೇವೆ. ಸುರಪುರ, ನರಗುಂದ ರಾಜರು, ಹಲಗಲಿ ಬೇಡರು, ಧಾರವಾಡದ ದೇಸಾಯಿಗಳು ಮುಂಡರಗಿ ಭೀಮರಾಯನ ಮುಂದಾಳತ್ವದಲ್ಲಿ ಬ್ರಿಟಿಷರ ವಿರುದ್ಧ ಹೋರಾಟ ನಡೆಸಿ ಪ್ರಾಣತ್ಯಾಗ ಮಾಡಿದರು.

**ಉಪ್ಪಿನ ಸತ್ಯಾಗ್ರಹ :**

1930ರಲ್ಲಿ ನಡೆದ ಉಪ್ಪಿನ ಸತ್ಯಾಗ್ರಹವು ಕರ್ನಾಟಕದಲ್ಲಿ ಅಭೂತಪೂರ್ವ ಯಶಸ್ಸನ್ನು ತಂದು ಕೊಟ್ಟಿತು. ಗಾಂಧೀಜಿ ದಂಡಿಯುಲ್ಲಿ ಉಪ್ಪನ್ನು ತಯಾರಿಸಿದ ದಿನವೇ ಕರ್ನಾಟಕಲ್ಲಿಯೂ ಅಂಕೋಲದ ಸಮುದ್ರ ತೀರದಲ್ಲಿ ನಲವತ್ತು ಸಾವಿರ ಜನರ ಸಮ್ಮುಖದಲ್ಲಿ ಸತ್ಯಾಗ್ರಹಿಗಳು ಉಪ್ಪನ್ನು ತಯಾರಿಸಿದರು. ಇದೇ ಸಂದರ್ಭದಲ್ಲಿ ಡಾ॥ ಹರ್ಡೀಕರರು ಸೇವಾದಳವನ್ನು ಸ್ಥಾಪಿಸಿದರು. ಈ ಸೇವಾದಳ ರಾಷ್ಟ್ರದಲ್ಲೆಲ್ಲಾ ಜನಪ್ರಿಯವಾಗಿ ಲಕ್ಷಾಂತರ ಜನರು ಸೇರಿದರು. ಕಾಂಗ್ರೆಸ್ ಅಧಿವೇಶನಗಳಲ್ಲಿ ಶಿಸ್ತು, ಶಾಂತಿಯನ್ನು ಕಾಪಾಡುವ ಹೊಣೆ ಈ ದಳದ್ದಾಗಿತ್ತು.

ಗಾಂಧೀಜಿಯವರ ಚಳುವಳಿಯ ಮತ್ತೊಂದು ವೈಶಿಷ್ಟ್ಯವೆಂದರೆ, ಮಹಿಳೆಯರು ಎಲ್ಲ ಚಳುವಳಿಗಳಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಆದುದು, ಗಾಂಧೀಜಿಯುವರು ಅನುಸರಿಸಿದ ಸತ್ಯಾಗ್ರಹ, ಅಹಿಂಸೆ, ಶಿಸ್ತು, ಸೇವಾಭಾವನೆ ಸ್ತ್ರೀಯರ ಸ್ವಭಾವಕ್ಕೆ ಹೊಂದಿಕೊಳ್ಳುತ್ತಿದ್ದುದರಿಂದ ಅವರು ಉತ್ತಮ ಸತ್ಯಾಗ್ರಹಿಗಳಾಗಿದ್ದರು. ಕರ್ನಾಟಕದಲ್ಲಿ ಉಪ್ಪಿನ ಸತ್ಯಾಗ್ರಹ ಯಶಸ್ವಿಯಾಗುವಂತೆ ಮಾಡಿದರು.

**ಕರನಿರಾಕರಣೆ ಚಳುವಳಿ :**

ಕರ್ನಾಟಕದಲ್ಲಿ ಉಪ್ಪಿನ ಸತ್ಯಾಗ್ರಹದಂತೆ ಮತ್ತೊಂದು ಯಶಸ್ವಿಯಾಗಿ ನಡೆದ ಚಳುವಳಿ ಎಂದರೆ ಕರನಿರಾಕರಣೆ ಚಳುವಳಿ. ಅಂಕೋಲ, ಸಿದ್ಧಾಪುರ ಮುಂತಾದ ತಾಲ್ಲೂಕುಗಳಲ್ಲಿ ನಡೆಯಿತು. ಇಲ್ಲಿ ಯಶಸ್ವಿಯಾಗಿ ನಡೆದಂತೆ ಕರನಿರಾಕರಣೆ ಚಳುವಳಿ ಬರಡೋಲಿಯಾವನ್ನು ಹೊರತುಪಡಿಸಿದಂತೆ ಭಾರತದಲ್ಲಿ ಬೇರೆ ಯಾವ ಕಡೆಯೂ ನಡೆಯಲಿಲ್ಲವೆನ್ನಬಹುದು.

ಕರ್ನಾಟಕ ರಾಜಕೀಯುವಾಗಿ ಜಾಗೃತಿಹೊಂದಿದ ರಾಜ್ಯವಾಗಿತ್ತು. ಇಲ್ಲಿನ ಮುಖಂಡರು ಭಾರತೀಯ ಕಾಂಗ್ರೆಸ್‌ನೊಂದಿಗೆ ಸದಾ ನಿಕಟ ಸಂಪರ್ಕವಿಟ್ಟು ಕೊಂಡಿದ್ದರು. ಸಂಸ್ಥಾನಗಳು ಕಾಂಗ್ರೆಸ್ ಸಮಿತಿಗಳನ್ನು ರಚಿಸಿಕೊಂಡು ಜವಾಬ್ದಾರ ಸರ್ಕಾರ ಸ್ಥಾಪನೆಗೆ ಹೋರಾಡಬೇಕೆಂದೂ. ಅದರಿಂದ ಅವರ ಶಕ್ತಿ ಹೆಚ್ಚುವುದೆಂದು ಅಖಿಲ ಭಾರತ ಕಾಂಗ್ರೆಸ್ ಸಂಸ್ಥೆ ಕರೆ ನೀಡಿತು. ಅವರ ಕರೆಯಂತೆ ಚಂಗಲರಾಯರೆಡ್ಡಿ ಮತ್ತು ಎ. ವೆಂಕಟಪ್ಪನವರು ಪ್ರಜಾಪಕ್ಷವನ್ನು ವಿಸರ್ಜಿಸಿ 1937ರಲ್ಲಿ ಮೈಸೂರು ಕಾಂಗ್ರೆಸ್ಸನ್ನು ಸ್ಥಾಪಿಸಿದರು. ಕರ್ನಾಟಕದಲ್ಲಿ ಮೊದಲ ಕಾಂಗ್ರೆಸ್ ಅಧಿವೇಶನ ಶಿವಪುರದಲ್ಲಿ ನಡೆಯಿತು. ಅಲ್ಲಿ ರಾಷ್ಟ್ರಧ್ವಜ ಸತ್ಯಾಗ್ರಹವಾಗಿ ನೂರಾರು ಜನರು ಬಂಧನಕ್ಕೊಳಗಾದರು. ಎರಡನೇ ಅಧಿವೇಶನ ವಿದುರಾಶ್ವತ್ಥದಲ್ಲಿ ನಡೆಯಿತು. ಅಲ್ಲಿ ನಡೆದ ಪೋಲೀಸ್ ಗೋಲಿಬಾರಿನಿಂದ ಅನೇಕರು ಹತರಾದರು.





**ಕ್ವಿಟ್ ಇಂಡಿಯಾ ಚಳುವಳಿ :**

1942ರಲ್ಲಿ ಗಾಂಧೀಜಿ ಅವರ ನೇತೃತ್ವದಲ್ಲಿ ನಡೆದ ಕ್ವಿಟ್ ಇಂಡಿಯಾ ಚಳುವಳಿ ಕರ್ನಾಟಕದಲ್ಲಿ ಭುಗಿಲೆದ್ದಿತು. ಬೆಂಗಳೂರು, ಮೈಸೂರು, ಬೆಳಗಾವಿ ಮತ್ತು ಧಾರವಾಡಗಳಲ್ಲಿ ಚಳುವಳಿ ತೀವ್ರವಾಗಿತ್ತು. ತಗಡೂರು ರಾಮಚಂದ್ರರಾಯರೂ ಸೇರಿದಂತೆ ಮೈಸೂರು ಕಾಂಗ್ರೆಸ್ಸಿನ ಎಲ್ಲ ಸದಸ್ಯರೂ ಬಂಧಿತರಾದರು. ಎಲ್ಲೆಡೆ ಸಭೆಗಳು ನಡೆದು ಗೋಲೀಬಾರ್, ಬಂದ್, ಲಾಠಿ ಚಾರ್ಜುಗಳಾದುವು. ಸೆರೆಮನೆಗಳು ಸಾಲದೆ ಅನೇಕ ಪಾಠಶಾಲೆಗಳು, ಪ್ರವಾಸಿ ಮಂದಿರ, ಛತ್ರಗಳು ಹಂಗಾಮಿ ಸೆರೆಮನೆಗಳಾಗಿ ಪರಿವರ್ತನೆಗೊಂಡವು. ಅನೇಕ ಊರುಗಳಲ್ಲಿ ಪ್ರತಿ ಸರ್ಕಾರಗಳು ಸ್ಥಾಪನೆಗೊಂಡವು. ತಾಳಕೆರೆ ಸುಬ್ರಮಣ್ಯ, ದಾಸಪ್ಪ, ವೀರಣ್ಣಗೌಡ, ಕೆ. ಹನುಮಂತಯ್ಯ, ಚಂಗಲ ರಾಯರೆಡ್ಡಿ, ಸಿ. ನಿಜಲಿಂಗಪ್ಪ, ಸಾಹುಕಾರ ಚನ್ನಯ್ಯ, ಜಿ. ನಾರಾಯಣ, ಎಂ.ಟಿ. ರಾಮರಾವ್, ತಗಡೂರು ರಾಮಚಂದ್ರರಾಯರು ಮೊದಲಾದವರು ಬಂಧಿತರಾದರು. ಪ್ರತಿದಿನ ಬೆಳಿಗ್ಗೆ ಬಂಧಿಸಿ ಸಂಜೆ ನೀಡುತ್ತಿದ್ದ ಬಂಧಿತರನ್ನು ಹೊರತುಪಡಿಸಿ ಕರ್ನಾಟಕದಲ್ಲಿ ಎಂಟು ಸಾವಿರಕ್ಕಿಂತಲೂ ಹೆಚ್ಚು ಜನರು ಬಂಧಿತರಾದರು. ಈ ಚಳುವಳಿಯಲ್ಲಿಯೇ ಶಿವಮೊಗ್ಗ ಜಿಲ್ಲೆಯ ಈಸೂರಿನಲ್ಲಿ ಅಧಿಕಾರಿಗಳ ಕೊಲೆಯಾಯಿತು. ಇದರಿಂದ ಕೋಪಗೊಂಡ ಬ್ರಿಟಿಷ್ ಸರ್ಕಾರ ಪ್ರತೀಕಾರವಾಗಿ ಐದು ಜನ ಚಳುವಳಿಗಾರರನ್ನು ಗಲ್ಲಿಗೇರಿಸಿದರು. ದಿನಗಳೆದಂತೆ ಚಳುವಳಿ ಹಿಂಸಾಚಾರಕ್ಕೆ ತಿರುಗಿತು. ರೈಲು ಕಂಬಿಗಳನ್ನು ಕೀಳುವುದು, ಟೆಲಿಫೋನ್ ತಂತಿಗಳನ್ನು ಕತ್ತರಿಸುವುದು, ರೈಲ್ವೇ ಸ್ಟೇಷನ್ನುಗಳು, ಅಂಚೆ ಕಛೇರಿಗಳನ್ನು ಸುಡುವುದು. ಖಜಾನೆ ಲೂಟಿ ಮುಂತಾದುವು ಮಿತಿ ಮೀರಿದವು. ಈ ಚಳುವಳಿಯಲ್ಲಿ ಶ್ರೇಷ್ಠ ಗಾಂಧಿಕಾರ್ಯಕರ್ತ, ಮಹಾನ್ ರಾಷ್ಟ್ರಭಕ್ತ ಮೈಲಾರ ಮಹದೇವಪ್ಪ ಮತ್ತು ಸಂಗಡಿಗರು ಪೋಲೀಸ್ ಗುಂಡಿಗೆ ಬಲಿಯಾದರು. ನಿಪ್ಪಾಣಿಯಲ್ಲಿ ಏಳು ಜನರ ಕಗ್ಗೊಲೆ ಯಾಗಿತು. ಭೂಗತ ಚಟುವಟಿಕೆಗಳು ಹೆಚ್ಚಾಯಿತು. ಸೆರೆಮನೆ ಯಲ್ಲಿದ್ದ ಗಾಂಧೀಜಿಗೆ ವಿಷಯ ಗೊತ್ತಾಗಿ ಕೂಡಲೇ ಎಲ್ಲ ರೀತಿಯ ಭೂಗತ ಚಟುವಟಿಕೆಗಳನ್ನು ನಿಲ್ಲಿಸಿ ಸರ್ಕಾರಕ್ಕೆ ಶರಣಾಗಬೇಕೆಂದು ಕರೆ ನೀಡಿದರು. ಅದರಂತೆ ದಿವಾಕರ, ವೆಂಕಟರಾಮಯ್ಯ, ಎಂ.ಜಿ. ರಾಮಚಂದ್ರರಾವ್ ಮೊದಲಾದವರು ಸರ್ಕಾರಕ್ಕೆ ಶರಣಾದರು.

ಭಾರತ ಸ್ವಾತಂತ್ರ್ಯದ ಅಂಗವಾಗಿ ಅಸಹಕಾರ ಚಳುವಳಿ, ಉಪ್ಪಿನ ಸತ್ಯಾಗ್ರಹ ಕರನಿರಾಕರಣೆ ಚಳುವಳಿ ಕ್ವಿಟ್ ಇಂಡಿಯಾ ಚಳುವಳಿಗಳು ಕರ್ನಾಟಕದಲ್ಲಿ ಅಭೂತ ಪೂರ್ವ ಯಶಸ್ಸನ್ನು ತಂದು ಕೊಟ್ಟಿತು. 1920ರಲ್ಲಿ ನಡೆದ ಅಸಹಕಾರ ಚಳುವಳಿಯಲ್ಲಿ ಭಾಗವಹಿಸಲು ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರು ಬೆಂಗಳೂರಿಗೆ ಬಂದು ಸ್ವಾತಂತ್ರ್ಯ ಹೋರಾಟಗಾರರಿಗೆ ಸ್ಫೂರ್ತಿಯನ್ನು ನೀಡಿದುದು ನಾಡಿನ ಭಾಗ್ಯ. ಗಾಂಧೀಜಿಯವರ ಕರೆಯ ಮೇರೆಗೆ ಸಾವಿರ ಸಾವಿರ ಸಂಖ್ಯೆಯಲ್ಲಿ ಸ್ವಾತಂತ್ರ್ಯ ಪ್ರೇಮಿಗಳು ಚಳುವಳಿಯಲ್ಲಿ ಭಾಗವಹಿಸಿ ಧೈರ್ಯ ಸಾಹಸವನ್ನು ಪ್ರದರ್ಶಿಸಿದರು. ನೂರಾರು ಜನ ನಿರ್ದಯಿ ಪೋಲೀಸರ ಗುಂಡಿಗೆ ಎದೆಯನ್ನು ಒಡ್ಡಿ ಅಮರರಾದರು.

ಹೀಗೆ ಭಾರತ ತನ್ನ ನಿರಂತರ ಹೋರಾಟದ ಫಲವಾಗಿ ಸ್ವಾತಂತ್ರ್ಯವನ್ನು ಗಳಿಸಿತು. 1947ನೇ ಆಗಸ್ಟ್ 15, ಭಾರತೀಯ ಇತಿಹಾಸದಲ್ಲಿ ಸ್ಮರಣೀಯ ದಿನ. ಮಹಾತ್ಮ ಗಾಂಧಿ, ವಲ್ಲಭಬಾಯಿ ಪಟೇಲ್, ಜವಾಹರಲಾಲ್ ನೆಹರು, ಸುಭಾಷ್ ಚಂದ್ರಬೋಸ್, ಗಡಿನಾಡ ಗಾಂಧಿ ಮೊದಲಾದ ರಾಷ್ಟ್ರಭಕ್ತರ ಮುಂದಾಳತ್ವದಲ್ಲಿ ಕಳೆದುಕೊಂಡಿದ್ದ ಸ್ವಾತಂತ್ರ್ಯ ವನ್ನು ಮತ್ತೆ ಪಡೆಯುವಂತಾಯಿತು. ವಿಶ್ವದ ಇತಿಹಾಸದಲ್ಲೇ ಬೃಹತ್ ರಾಷ್ಟ್ರವೊಂದು ಅಹಿಂಸಾತ್ಮಕ ಹೋರಾಟದಿಂದ ಸ್ವಾತಂತ್ರ ಗಳಿಸಿದ ಕೀರ್ತಿ ಭಾರತಕ್ಕೆ ಸಲ್ಲುತ್ತದೆ.

ಭಾರತ ಸ್ವಾತಂತ್ರ್ಯ ಭದ್ರ ತಳಪಾಯದ ಮೇಲೆ ನಿರ್ಮಿಸಿದ ವೀರಸೌಧ, ತ್ಯಾಗ ಬಲಿದಾನಗಳ ವಜ್ರಗಾರೆಯ ಮೇಲೆ ನಿರ್ಮಿಸಿರುವ ಭದ್ರಕೋಟೆ. 60ನೆಯ ಸ್ವಾತಂತ್ರೋ ತ್ಸವವನ್ನು ಆಚರಿಸುತ್ತಿರುವ ನಾವು ನಮ್ಮ ಹಿರಿಯರು ಮಾಡಿದ ತ್ಯಾಗ ಅನುಭವಿಸಿದ ಕಷ್ಟ, ನಷ್ಟ, ನೋವುಗಳನ್ನು ಮರೆಯಬಾರದು, ಅವರ ನೆನಪು ನಮಗೆ ಸದಾ ದಾರಿದೀಪ.

ಕವಿವಾಣಿ ಹೇಳುವಂತೆ

*ಅಸ್ಥಿ ಪಂಜರಗಳಲಿ ಮತ್ತೆ ಚೇತನ ತುಂಬಿಕೊಂಡಿತು*
*ಆತ್ಮಗೌರವ ಹೊಮ್ಮಿ ಬಂದಿತು*
*ಮಣ್ಣು ದೇಹಿಗಳೆಲ್ಲ ವಜ್ರದೇಹಿಗಳಾಗಿ ಹೋರಾಡಿ*
*ಮಾತೃಭೂಮಿಯ ಸೇವೆ ಸಲ್ಲಿಸಿದರು.*

'ಸ್ವಾತಂತ್ರ್ಯವನ್ನು ಗಳಿಸಲು ನಡೆಸಿದ ಹೋರಾಟಕ್ಕಿಂತಲೂ ಅದನ್ನು ಉಳಿಸಿಕೊಳ್ಳಲು ಹೆಚ್ಚಿನ ಹೋರಾಟ ನಡೆಸಬೇಕಾಗುತ್ತದೆ. ಏಕೆಂದರೆ 'ಸ್ವಾತಂತ್ರ್ಯ' ಎನ್ನುವುದು ಅನುಪಮವಾದ ಅಮೂಲ್ಯವಾದ 'ಜೀವರತ್ನ'.

*

# ಅಕ್ಕನೂ, ಅಷ್ಟಾವರಣವೂ, ನಾನೂ

– ಪ್ರೇಮಾ ಮಲ್ಲಣ್ಣ, 'ಶಾಂಭವಿ' ೩ನೇ ಗಲ್ಲಿ, ಸೋಮೇಶ್ವರಪುರಂ, ತುಮಕೂರು–೫೭೨ ೧೦೧.

ಶ್ರೀ ಬಿ.ಎಚ್.ಎಮ್. ಸದಾಶಿವಯ್ಯನವರು ಬರೆದಿದ್ದ 'ಏಕಾಂತವಾಸದ ಮಲ್ಲಯ್ಯ' ಎಂಬ ಲೇಖನವನ್ನು ಓದುತ್ತಿದ್ದೆ. ಅದರಲ್ಲಿ ಅವರು ಶ್ರೀಶೈಲ ದೇವಸ್ಥಾನದ ಪ್ರಾಕಾರದ ಮೇಲೆ ಕೆತ್ತಿರುವ ಚಿತ್ರಗಳಲ್ಲಿ ಒಂದು ಚಿತ್ರದ ವಿವರ ಕೊಟ್ಟಿದ್ದು ಹೀಗಿತ್ತು– 'ಒಂದು ಬಾಳೇಗಿಡ ಅದರ ಅಡಿಯಲಿ ಒಂದು ಶಿವಲಿಂಗ, ಆ ಲಿಂಗದಿಂದ ಎರಡು ಕೈಗಳು ಹೊರ ಚಾಚಲ್ಪಟ್ಟಿದ್ದು ಯಾರನ್ನೋ ಆಹ್ವಾನಿಸುವಂತಿದೆ. ಆ ಶಿವಲಿಂಗದ ಮುಂದೆ ಓರ್ವ ನಗ್ನ ಬಾಲಿಕೆಯು, ಕೈಯಲ್ಲಿ ರುದ್ರಾಕ್ಷಿಮಾಲೆ, ಲಿಂಗದ ಬಳಿ ಧಾವಿಸುತ್ತಿದ್ದಾಳೆ. 'ನನ್ನ ಮನದಲ್ಲಿ ಆ ಚಿತ್ರ ಜೀವಂತ ವಾಯಿತು. ಮಹಾದೇವಿಯಕ್ಕ ಕದಳಿವನಕ್ಕೆ ಬಂದು ಮಲ್ಲಯ್ಯನ ಎದೆಯಲ್ಲಿ ಅಡಗಿದ ದೃಶ್ಯ ಮೂಡಿ, ಅದರಿಂದ ಹಿಂದಕ್ಕೆ ಸರಿದು ಅವಳ ಬಾಲ್ಯ ಶಿಕ್ಷಣ, ಗೆಳತಿಯರು, ಯೌವನಕ್ಕೆ ಕಾಲಿಟ್ಟುದು ಚೆನ್ನಮಲ್ಲಿಕಾರ್ಜುನನೆಂಬ ಅಲೌಕಿಕ ಪತಿಯನ್ನು ಆರಿಸಿಕೊಂಡದ್ದು, ಲೌಕಿಕ ಪತಿಯನ್ನು ತ್ಯಜಿಸಿ ಬಸವಣ್ಣನ ಕಲ್ಯಾಣಪಟ್ಟಣಕ್ಕೆ ಪಯಣ– ಓದಿದ್ದ ಘಟನೆಗಳ ನೆನಪಿನ ಸರಮಾಲೆಗಳ ಮಧ್ಯೆ ನಿದ್ದೆ ಆವರಿಸಿತ್ತು. ನಿದ್ರೆ ಕವಿದಿತ್ತು. ಆದರೆ ನಾನು ಎದ್ದಿದ್ದೆ. ಕಾಣುತ್ತಿದ್ದೆ ದಿವ್ಯ ಬೆಳಕೊಂದ, ಬೆಳದಿಂಗಳ ಬಾಲೆ ಅವಳೇ ಅಕ್ಕಮಹಾ ದೇವಿಯಕ್ಕ. ಮೈಮುಚ್ಚಿದ ಕೇಶರಾಶಿ, ಗೌರವ ವರ್ಣದ ಮುಖ ಕಮಲ ಸೌಂದರ್ಯವೇ ಮೈದಾಳಿ ಬಂದಂತೆ, ಮೆಲ್ಲಮೆಲ್ಲನೆ ಅಡಿ ಇಡುತ್ತಿದ್ದಾಳೆ, ಪಕ್ಷಿಗಳೊಂದಿಗೆ ಮೆಲ್ನುಡಿಯುತ್ತಿದ್ದಾಳೆ. ಗಿಳಿ, ಕೋಗಿಲೆ, ನವಿಲು, ಹಂಸಗಳನ್ನು ತನ್ನ ಚೆನ್ನಮಲ್ಲಿಕಾರ್ಜುನನ ಇರುವಿಕೆಯನ್ನು ತೋರಿಸಿರೆಂದು ಕೇಳುತ್ತಿದ್ದಾಳೆ. ದುಂಬಿಗಳು ಝೇಂಕಾರ ಗೈಯುತ್ತಾ ಅವಳಿಗೆ ತೋರುತ್ತಿವೆ. ಅಕ್ಕ ನನ್ನತ್ತ ನೋಡಲಿಲ್ಲ, ಪಕ್ಷಿ ಸಂಕುಲ ನನ್ನತ್ತ ಅಕ್ಕನನ್ನು ಬಿಡಗೊಡುವುದಿಲ್ಲವೆಂದರಿತ ನಾನು ಓಡುತ್ತ ಹೋಗಿ ಅಕ್ಕನನ್ನು ಹಿಡಿದೆ, ಶರಣೆಂದೆ. ಅಕ್ಕನ ಮೊಗದಲ್ಲಿನ ಮುಗುಳ್ನಗೆ ಮಾಸಿತು. ನೀನೇಕೆ ಇಲ್ಲಿಗೆ ಬಂದೆ? ಪಕ್ಷಿಗಳ ಸಂಗವನ್ನು ತೊರೆಸಿದೆಯಲ್ಲಾ! ಎಂಬಂತಿತ್ತು ಅವಳ ಭಾವ ಮಾತ ನಾಡಲಿಲ್ಲ ವಚನವೊಂದನ್ನು ಹಾಡಿದಳು–

*'ಅಲ್ಲದವರೊಡನಾಡಿ ಎಲ್ಲಾ ಸಂಗವ ತೊರೆದೆ ನಾನು*
*ನಾರಿಸಂಗವ ತೊರೆದೆ, ನೀರ ಹೊಳೆಯ ತೊರೆದೆ ನಾನು*
*ಎನ್ನ ಮನದೊಡೆಯ ಚೆನ್ನಮಲ್ಲಿಕಾರ್ಜುನನ ಕೂಡುವ ಭರದಿಂದ*
*ಎಲ್ಲಾ ಸಂಗವ ತೊರೆದೆ ನಾನು'*

ಅಕ್ಕಾ, ನಿನ್ನನ್ನು ಪಕ್ಷಿ ಸಂಕುಲದಿಂದ ತೊರೆಸಿದ್ದಕ್ಕಾಗಿ ಕ್ಷಮೆ ಬೇಡುತ್ತೇನೆ. ನೀನು ಸ್ತ್ರೀಕುಲಕ್ಕೆ ಬೆಳಕಾಗಿ ಬಂದವಳು. ನಮ್ಮೆಲ್ಲರ ಮಾರ್ಗದರ್ಶಿ, ಕೃಪೆಯಿಟ್ಟು ನನಗೂ ಸಾಧನೆಯ ಮಾರ್ಗ ತೋರಕ್ಕಾ ಎಂದೆ. ಅಕ್ಕ ಸಮಾಧಾನದಿಂದ ಉಲಿದಳು–

*'ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ ನಮೋ*
*ಭವಬಂಧನವ ಬಿಡಿಸಿ ಪರಮಸುಖವ ತೋರಿದ ಗುರುವೇ ನಮೋ*
*ಭವಿಯೆಂಬುದ ತೊಡೆದು ಭಕ್ತ ಎಂದೆನಿಸಿದ ಗುರುವೇ ನಮೋ ನಮೋ*
*ಚೆನ್ನಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ*
*ಕೊಟ್ಟ ಗುರುವೇ ನಮೋ ನಮೋ'*

ಅಕ್ಕ ನನಗೆ ಅಷ್ಟಾವರಣವನ್ನು ಪಾಲಿಸು ಎಂದು ಹೇಳುತ್ತಿದ್ದಾಳೆ. ಅಷ್ಟಾವರಣಗಳ ಧಾರಣೆ ಶಿವತತ್ವವನ್ನ ರಿಯುವ ಮೊದಲ ಸೋಪಾನವೆಂದು ನಾನು ತಿಳಿದಿದ್ದೆ. ಅಕ್ಕ ಹೇಳುತ್ತಿರುವುದೂ ಅದನ್ನೇ ಎಂದರಿವಾಯಿತು. ಎರಡನೆಯ ಹಂತ ಗುರು ಅನುಗ್ರಹಿಸಿದ ಇಷ್ಟಲಿಂಗವನ್ನು ಧರಿಸಿ ಪೂಜಿಸುವುದು ಎಂದುಕೊಂಡೆ

ಅಕ್ಕ ಲಿಂಗವಾಗುವ ಪರಿಯನ್ನು ಕುರಿತು ಹಾಡತೊಡಗಿದಳು

*'ಲಿಂಗಪೂಜಕಂಗೆ ಫಲಪದಂಗಳಲ್ಲದೆ ಲಿಂಗವಿಲ್ಲ*
*ಧರ್ಮತ್ಯಾಗಿಗೆ ನರಕವಲ್ಲದೆ ಲಿಂಗವಿಲ್ಲ*
*ವೈರಾಗ್ಯ ಸಂಪನ್ನಂಗೆ ಮುಕ್ತಿಯಿಲ್ಲದೆ ಲಿಂಗವಿಲ್ಲ*
*ಜ್ಞಾನಿಗೆ ಪರಿಭ್ರಮಣವಲ್ಲದೆ ಲಿಂಗವಿಲ್ಲ.*
*ಇಂತಪ್ಪ ಭ್ರಾಂತನತಿಗಳದು ತಾನು ತಾನಾದ ಇರವೆಂತೆಂದಡೆ*
*ದ್ವೈತವನಳಿದು ಅದ್ವೈತದಿಂದ ತನ್ನ ತಾನರಿದಡೆ*
*ಚೆನ್ನಮಲ್ಲಿಕಾರ್ಜುನ ಲಿಂಗವು ತಾನೆ'*

ಲಿಂಗವನ್ನು ಪೂಜಿಸುತ್ತಾ ಲಿಂಗಾಂಗ ಸಾಮರಸ್ಯವುಂಟಾಗಿ ಜೀವಿ ತಾನೇ ಲಿಂಗವಾಗುತ್ತಾನೆ ಎಂಬ ಅಕ್ಕನ ಮಾತು ಸರ್ವಗ್ರಾಹ್ಯ. ಅಕ್ಕ ನನ್ನೊಡನೆ ಒಂದು ಮಾತನ್ನೂ ಆಡದೆ ವಚನಗಳಲ್ಲಿ ನನ್ನ ಮನದ ಸಂದೇಹಗಳಿಗೆ ಉತ್ತರಿಸುತ್ತಿಹಳಲ್ಲ. ಮೂರನೆಯ ಅಷ್ಟಾವರಣ 'ಜಂಗಮ' ಅಕ್ಕನ ಕಾಲದಲ್ಲಿ ಜಂಗಮರು ಜ್ಞಾನಿಗಳಾಗಿದ್ದರೇನೋ? ಈಗ ಈ ನಾನು





ಪ್ರಶ್ನೆಕೇಳಬೇಕೆನ್ನುವಷ್ಟರಲ್ಲೇ ಜಂಗಮದ ವಚನ ಪ್ರಾರಂಭಿಸಿಬಿಟ್ಟಳಲ್ಲಾ ಎಂದು ಅಚ್ಚರಿ ಮೂಡಿತು.

*'ಜಂಗಮನ ಕೈ ಹೊಯ್ದು ನಕ್ಕು ಕೆಟ್ಟರಯ್ಯಾ*
*ಸರಸದಲಿ ಮುಟ್ಟಿ ಪೂಜಿಸುವರೆ ನಿಮಗೆ ಲಿಂಗವಿಲ್ಲ*
*ಜಂಗಮವೆನ್ನ ಪ್ರಾಣ, ಜಂಗಮವೆನ್ನ ವಿಧಿ ವಿಧಾನ*
*ಜಂಗಮವೆನ್ನ ಹರುಷದ ಮೇರೆ, ಚೆನ್ನಮಲ್ಲಿಕಾರ್ಜುನಾ*
*ಜಂಗಮದ ತಿಂಥಿಣಿಯಲಿ ಓಲಾಡುವೆನು'.*

ಓ ಜಂಗಮದ ಮಹಿಮೆ ಅಪಾರವಾಗಿದೆ. ಇನ್ನು ಮುಂದೆ ನನ್ನ ದೃಷ್ಟಿಯನ್ನು ಬದಲಾಯಿಸಿಕೊಳ್ಳುತ್ತೇನೆ. ಲಿಂಗದ ಪ್ರಾಣ ಜಂಗಮ ಅವನನ್ನು ನೋಡಿ ನಕ್ಕರೆ ಅವಹೇಳನ ಮಾಡಿದರೆ ಲಿಂಗಕ್ಕೆ ಮಾಡುವ ಅಪಚಾರ. ನನ್ನ ಪುಣ್ಯ ಬಲವತ್ತರವಾಗಿದ್ದರೆ ಉತ್ತಮ ಜಂಗಮನನ್ನು ಕಾಣುತ್ತೇನೆ. ಅಕ್ಕ ಸುಮ್ಮನಿರುವಳಲ್ಲಾ! ಇಲ್ಲಿ ಪಾದೋದಕ ಪ್ರಸಾದದ ಬಗ್ಗೆ ಹೇಳುತ್ತಿದ್ದಾಳೆ

*'ಲಿಂಗಕ್ಕೆ ರೂಪಸಲಿಸುವೆ, ಜಂಗಮಕ್ಕೆ ರುಚಿಯಸಲಿಸುವೆ*
*ಕಾಯಕ್ಕೆ ಶುದ್ಧ ಪ್ರಸಾದವ ಕೊಂಬೆ, ಪ್ರಾಣಕ್ಕೆ ಸಿದ್ಧ ಪ್ರಸಾದವ ಕೊಂಬೆ*
*ನಿಮ್ಮ ಪಾದೋದಕ ಪ್ರಸಾದದಿಂದ ಧನ್ಯಳಾದೆನು ಕಾಣಾ*
*ಚೆನ್ನಮಲ್ಲಿಕಾರ್ಜುನಯ್ಯಾ'.*

ಅಕ್ಕ ಹೇಳಿದ ಈ ವಚನದಲ್ಲಿನ ಭಕ್ತನಾದವನು ಅರ್ಚನ –ಅರ್ಪಣ–ಅನುಭಾವಗಳನ್ನು ತಪ್ಪದೆ ನಡೆಸಬೇಕು ಲಿಂಗಕ್ಕೆ ರೂಪ, ಜಂಗಮಕ್ಕೆ ರುಚಿ ಪ್ರಸಾದವನ್ನು (ನೈವೇದ್ಯ) ಕೊಟ್ಟ ಗುರು ಜಂಗಮರಿಂದ ಶುದ್ಧ–ಸಿದ್ಧ ಪಾದೋದಕ ಪ್ರಸಾದಗಳನ್ನು ಸ್ವೀಕರಿಸಬೇಕೆಂದು ತಿಳಿದೆ, ವಿಭೂತಿ ಮತ್ತು ರುದ್ರಾಕ್ಷಿಯ ಬಗ್ಗೆ ತಿಳಿಸಿ ಹೇಳುವಳೆಂದು ಕರ ಜೋಡಿಸಿ ನಿಂತುಕೊಂಡೆ. ಅಕ್ಕನ ತುಟಿಗಳು ಅಲುಗಿದುವು. ವಚನವೊಂದು ಸುಶ್ರಾವ್ಯವಾಗಿ ಕಂಠದಿಂದ ಹೊರ ಹೊಮ್ಮಿತು.

*'ಒಪ್ಪುವ ವಿಭೂತಿಯ ನೊಸಲಲ್ಲಿ ಧರಿಸಿ*
*ದೃಷ್ಟಿವಾರಿ ನಿಮ್ಮನೋಡಲೊಡನೆ*
*ಬೆಟ್ಟದಷ್ಟು ತಪ್ಪುಳ್ಳಡೆಯೂ ಮುಟ್ಟಲಮ್ಮವು ನೋಡಾ*
*ಚೆನ್ನಮಲ್ಲಿಕಾರ್ಜುನಾ.*

ವಿಭೂತಿಯ ಮಹಿಮೆಯನ್ನು ಚುಟುಕಾಗಿ ಹೇಳಿ ವಚನವನ್ನು ಮುಂದುವರೆಸಿದಳು–

*ಶಿವಭಕ್ತರ ಪಾದರೇಣುವೇ ಅನುಲೇಪನವೆನಗೆ*
*ರುದ್ರಾಕ್ಷಿಯೇ ಮೈದೊಡಿಗೆಯೆನಗೆ ರುದ್ರಾಕ್ಷಿಯೇ*
*ಮೈದೊಡಿಗೆಯೆನಗೆ ಚೆನ್ನಮಲ್ಲಿಕಾರ್ಜುನನ*
*ಮದವಳಿಗೆಗೆ ಬೇರೆ ಶೃಂಗಾರವೇಕೆ.*

ಅರಮನೆಯನ್ನೇ ತೃಣೀಕರಿಸಿ ಬಂದ ವೀರವೀರಾಗಿಣಿ ಚೆನ್ನಮಲ್ಲಿಕಾರ್ಜುನನ ಮದುವಣಗಿತ್ತಿಗೆ ಮುತ್ತು ರತ್ನ–ಚಿನ್ನದೊಡವೆಗಳು ಬೇಕಿಲ್ಲ. ವಿಭೂತಿ ಧಾರಣೆ ಮಾಡಿಕೊಂಡು ರುದ್ರಾಕ್ಷಿಗಳನ್ನೇ ಮೈದೊಡಿಗೆಯನ್ನಾಗಿ ಮಾಡಿಕೊಂಡರೆ ಅದೇ ಶೋಭೆ, ಅಕ್ಕನಿಗೆ ಶಿರಬಾಗಿ ವಂದಿಸುತ್ತಾ ಯಾವ ಮಂತ್ರ 'ಜಪಿಸಬೇಕು ಹೇಳಾ ತಾಯಿ ಎಂದು ನಾನು ಕೇಳುವಷ್ಟರಲ್ಲೇ ಅಕ್ಕ ಹಾಡಿದಳು–

*'ದುರಿತ ಅನ್ಯಾಯವ ಪರಿಹರಿಸಬಲ್ಲಡೆ*
*ಓಂ ನಮಃ ಶಿವಾಯ ಓಂ ನಮಃ ಶಿವಾಯ ಶರಣೆಂಬುದೇ ಮಂತ್ರ*
*ನಮಂ ಶಿವಾಯೇತಿ ಮಂತ್ರಂ ಯಃಕರೋತಿ ತ್ರಿಪುಂಡ್ರಕಂ*
*ಸಪ್ತಜನ್ಮಕೃತಂ ಪಾದಂ ತತ್‌ಕ್ಷಣಾದೇವನಶ್ಯತಿ'–*

ನಾನು ಓಂ ನಮಃ ಶಿವಾಯ ಓಂ ನಮಃ ಶಿವಾಯ ಎಂದು ಪಠಿಸತೊಡಗಿದೆ. ಅಕ್ಕ ವನರಾಜಿಯ ಮಧ್ಯೆ ಕರಗತೊಡಗಿದಳು. ಆದರೆ ಅವಳ ಮನದಿಚ್ಛೆಯ ವಚನವೊಂದು ಕೇಳಿ ಬರುತ್ತಿತ್ತು–

*'ಕಲ್ಯಾಣ ಕೈಲಾಸವೆಂಬ ನುಡಿ ಹಸನಾಯಿತ್ತು*
*ಒಳಗೂ ಕಲ್ಯಾಣ, ಹೊರಗೂ ಕಲ್ಯಾಣ !*
*ಇದರಂತುವನಾರು ಬಲ್ಲರಯ್ಯಾ ?*
*ನಿಮ್ಮ ಸತ್ಯಶರಣರ ಸುಳುಹು ತೋರುತ್ತಿದೆಯಯ್ಯಾ*
*ನಿಮ್ಮ ಶರಣ ಬಸವಣ್ಣನ ಕಾಂಬೆನೆಂಬ*
*ತವಕವೆನಗಾಯಿತ್ತು ಕೇಳಾ ಚೆನ್ನ ಮಲ್ಲಿಕಾರ್ಜುನಾ'*

ಧ್ವನಿ ಕ್ಷೀಣಗೊಂಡಿತು, ನಿಶ್ಯಬ್ದತೆ ತಾಂಡವವಾಡಿತು. ಮನದ ಬೆಳಕಿನಲ್ಲಿ ತೋರುತ್ತಿತ್ತು. 'ಕಲ್ಯಾಣ'ದ ಅರ್ಥ ಕಲ್ಯಾಣವೇ ಕೈಲಾಸ ಏಕೆಂದರೆ ಅಲ್ಲಿ ಅಂತರಂಗದಲ್ಲಿಯೂ ಕಲ್ಯಾಣ ವಾಗಿದೆ. ಬಹಿರಂಗದಲ್ಲಿಯೂ ಕಲ್ಯಾಣವಾಗಿದೆ. ಇದು ಮಾರ್ಮಿಕವಾಗಿದೆ. ಸತ್ಯಶರಣರು ಅಲ್ಲಿದ್ದಾರೆ. ಅವರನ್ನು ಕಾಣುವ ತವಕ ಅಕ್ಕನಿಗುಂಟಾದಂತೆ ಅವಳನ್ನು ಕಾಣುವ ತವಕ ಅವರಿಗಿದೆ.

ನಾನೂ ಕಲ್ಯಾಣಕ್ಕೆ ಹೋಗಬೇಕು, ಹೋಗಬೇಕು ಎಂದು ಬಡಬಡಿಸುತ್ತಿದ್ದೆ. ಸೂರ್ಯದೇವ ತನ್ನ ಕಿರಣಗಳ ಮೂಲಕ ಸಂದೇಶ ಹರಡುತ್ತಿದ್ದ. ಅಂದು ಕಲ್ಯಾಣದ ಮೇಲೆ ಹರಡಿದ್ದ ಬೆಳಕನ್ನೇ ಇಂದು ಜಗದ ಮೇಲೆ ಹರಡುತ್ತಿರುವೆ. ಬೆಳಕಲ್ಲಿ ಮೀಯುವ ಸಂಕಲ್ಪ ಅವರದು 'ಯದ್ಭಾವಂ ತದ್ಭವತಿ' ತಟ್ಟನೆದ್ದೆ, ನಿದ್ರೆಯಲ್ಲಿ ನನಗಾದ ರೋಚಕ ಅನುಭವವ ಬರೆದಿಟ್ಟೆ.

*

## ಮನೆಮನಗಳಲ್ಲಿ ಡಾ॥ ಶ್ರೀ ಶ್ರೀಶಿವಕುಮಾರಮಹಾಸ್ವಾಮಿಗಳವರ ಚರಿತೆ ಹಾಗೂ ಗುರುವಂದನಾ ಧರ್ಮಗೋಷ್ಠಿ



ಸಿದ್ಧಗಂಗಾ ಶ್ರೀಗಳು ದೀನ ದಲಿತರ ಆತ್ಮಗೌರವದ ಮೇರು ಶಿಖರವಾಗಿ ಗ್ರಾಮೀಣರ ಬದುಕಿಗೆ ಜ್ಯೋತಿರ್ ಲಿಂಗವಾದವರು ಎಂದು ಸಂಶೋಧಕ ಡಾ॥ ಚಿಕ್ಕಣ್ಣ ಯೆಣ್ಣೆಕಟ್ಟೆ ಅಭಿಪ್ರಾಯಪಟ್ಟರು. ತುಮಕೂರಿನ ಶಿವಶರಣರ ಬಳಗ, ಲಿಂ. ಸಾಗರನಹಳ್ಳಿ ರೇವಣ್ಣನವರ ವಿದ್ಯಾನಗರದ ಮನೆಯ ಆವರಣದಲ್ಲಿ ಏರ್ಪಡಿಸಿದ್ದ ಸಿದ್ಧಗಂಗಾ ಶ್ರೀಗಳ ಗುರುವಂದನಾ ಧರ್ಮಚಿಂತನ ಗೋಷ್ಠಿ ಕಾರ್ಯಕ್ರಮದಲ್ಲಿ ವಿಶೇಷ ಉಪನ್ಯಾಸ ನೀಡಿದ ಡಾ॥ ಚಿಕ್ಕಣ್ಣ ಯಣ್ಣೆಕಟ್ಟೆ, ಬುದ್ಧನ ಬೆಳಕು, ಬಸವಣ್ಣನ ಕಾಯಕ ಪ್ರಜ್ಞೆ, ಶರಣ ಸಂಸ್ಕೃತಿಯನ್ನು ಸಿದ್ಧಗಂಗಾ ಮಠ ಸಾರ್ಥಕಗೊಳಿಸಿದೆ ಎಂದರು. ಒಂದು ವರ್ಗಕ್ಕೆ ಮೀಸಲಾಗಿದ್ದ ಸಂಸ್ಕೃತ ಭಾಷೆ, ಬಾದಕ ಇಂಗ್ಲೀಷ್ ಕಲಿಕೆ, ಎರಡಕ್ಕೂ 20ನೇ ಶತಮಾನದ ಆದಿಯಲ್ಲಿಯೇ ವಿಶೇಷ ಗಮನ ಹರಿಸಿದ ಶ್ರೀಗಳು ಈ ನೆಲದ ಪುರುಷರೂಪದ ದೈವ. ಅನ್ನ ಅಕ್ಷರದ ಮಹಾಬೆಳಗು.

ಚಿಲಕವಾಡಿ, ಶಂಭು ಲಿಂಗ ಕ್ಷೇತ್ರಾಧಿಪತಿ ಶ್ರೀ ಕುಮಾರ ನಿಜಗುಣಸ್ವಾಮಿಗಳು ದಿವ್ಯಸಾನ್ನಿಧ್ಯ ವಹಿಸಿ, ಗುರುಸ್ಥಾನವು ಬಹು ದೊಡ್ಡದು ಎಂಬುದನ್ನು ಸಾರ್ಥಕವಾಗಿ ಸಮಾಜಕ್ಕೆ ತೋರಿಸಿದ ಧೀಮಂತ ಶಕ್ತಿ ಸಿದ್ಧಗಂಗಾ ಶ್ರೀಗಳು ಎಂದರು.

ಲೋಕೇಶ್ವರಿ ಪ್ರಭು ಅವರು ಸ್ವಾಗತಿಸಿದರು. ಶಿವಶರಣರ ಬಳಗದ ರಾಜಶೇಖರ್ ನಿರೂಪಿಸಿದರು. ಪ್ರೊ.ಹೆಚ್.ವಿ. ವೀರಭದ್ರಯ್ಯನವರು ಆಶಯ ಭಾಷಣ ಮಾಡಿದರು. ಕಾರ್ಯಕ್ರಮದಲ್ಲಿ ಶ್ಯಾನುಭೋಗ್‌ರವರ ವಚನ ಗಾಯನ ವಿಶೇಷವಾಗಿತ್ತು. ಸಾಗರನಹಳ್ಳಿ ಪ್ರಭುರವರು ವಂದನಾರ್ಪಣೆಯನ್ನು ಮಾಡಿದರು.

## ಭರತ ಖಂಡ

ಭರತಖಂಡ, ಭಾರತ, ಇಂಡಿಯಾ ಲೋಕ ಪೂಜ್ಯವಾಗಿದ್ದ ಕಾಲ ವೊಂದಿತ್ತು. ಇದನ್ನು ವೇದಭೂಮಿ ಎಂದು ಕರೆಯುತ್ತಿದ್ದರು. ಪಾಹಿಯಾನ್, ಹ್ಯೂಯನ್‌ತ್ಸಾಂಗ್ ಮೊದಲಾದ ವಿದೇಶಿ ಯಾತ್ರಿಕರು ಭಾರತದ ಸಂಸ್ಕೃತಿ, ಸಾಹಿತ್ಯ ಮತ್ತು ಕಲೆಯನ್ನು ಪ್ರಶಂಸಿದ್ದಾರೆ.

ವಿವೇಕಾನಂದರು 4 ವರ್ಷ ಇಂಗ್ಲೆಂಡಿನಲ್ಲಿದ್ದು, ಭಾರತಕ್ಕೆ ಹಿಂತಿರುಗುವ ಮೊದಲು, ಆಂಗ್ಲ ಶಿಷ್ಯರು 'ಸ್ವಾಮೀಜಿ ಈಗ ಭರತ ಖಂಡವನ್ನು ಹೇಗೆ ನೋಡುತ್ತೀರಿ' ಎಂದು ಕೇಳಿದಾಗ ಸ್ವಾಮೀಜಿ ನಾನು ಬರುವುದಕ್ಕೆ ಮುಂಚೆ, ಇಂಡಿಯಾ ದೇಶವನ್ನು ಪ್ರೀತಿಸುತ್ತಿದ್ದೆ. ಈಗ ಭರತ ಖಂಡದ ಧೂಳು ಕೂಡ ನನಗೆ ಪವಿತ್ರವಾಗಿದೆ. ಅದರ ಮೇಲೆ ಬೀಸುವ ಗಾಳಿ ಪವಿತ್ರವಾಗಿದೆ. ಎಂದರು. ಎಂತಹ ದೇಶ ಪ್ರೇಮ!

'ಜನನೀ ಜನ್ಮಭೂಮಿಶ್ಚ, ಸ್ವರ್ಗಾದಪಿಗರೀಯಸಿ' ತಾಯಿನಾಡು, ತಾಯಿ ಸ್ವರ್ಗಕ್ಕಿಂತಲೂ ಮಿಗಿಲು ಎಂಬ ಮಾತಿದೆ. ರಾಮಾಯಣ, ಮಹಾಭಾರತ, ಭಾಗವತ ಹಾಗೂ ಭಗವದ್ಗೀತೆ ಸಮಗ್ರ ಭಾರತದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ.

ಕಾಳಿದಾಸ, ಭಾಸ, ಭವಭೂತಿ, ಮಾಘ, ಭಾರವಿ, ದಂಡಿ ಮೊದಲಾದ ಸಂಸ್ಕೃತ ಕಾವ್ಯಗಳು, ಉಳಿದ ಪ್ರಾಂತೀಯ ಭಾಷೆಗಳ ಕಾವ್ಯಗಳು ಭಾರತೀಯರ ವೈವಿಧ್ಯಮಯ ಜೀವನವನ್ನು, ಅವರ ಉದಾತ್ತ ಧ್ಯೇಯಗಳನ್ನು ಸಾರಿಸಾರಿ ಹೇಳುತ್ತವೆ.

ಒಬ್ಬ ಭಿಕ್ಷುಕನು ನರೇಂದ್ರನನ್ನು ತನಗೆ ಬಟ್ಟೆ ಇಲ್ಲ ಕೊಡು ಎಂದನು. ಹುಡುಗ ತನ್ನ ಉತ್ತರೀಯವನ್ನು ಅವನಿಗೆ ಕೊಟ್ಟನು. ಬೆಂಗಳೂರು ಕೆಂಪೇಗೌಡರು ವೀರಣ್ಣನಿಗೆ ಹೇಳುತ್ತಾರೆ ಶ್ರೀಕೃಷ್ಣ ರಾಯರ ಆಶ್ರಿತರಾದ ನಾವು ಅಧರ್ಮದಿಂದ ರಾಜ್ಯ ವಿಸ್ತರಿಸಿದರೆ ಇಡೀ ಕನ್ನಡ ನಾಡೇ ತಲೆ ತಗ್ಗಿಸಬೇಕಾಗುತ್ತದೆ ಎಂದು ಇಂತಹ ಉದಾಹರಣೆಗಳನ್ನು ಇಂದಿನ ಭಾರತೀಯರು ಚಿಂತಿಸಬೇಕಾಗಿದೆ.

ಗಾಂಧೀಜಿಯವರ ವ್ಯಕ್ತಿತ್ವ ಇಡೀ ವಿಶ್ವಕ್ಕೇ ಆದರ್ಶಪ್ರಾಯ ವಾದುದು. ಭಾರತದ ಮೂಲೆ ಮೂಲೆಗಳ ಹಳ್ಳಿಗಳನ್ನು ದರ್ಶಿಸಿದ್ದಾರೆ. ಕೋಟಿ ಕೋಟಿ ಭಾರತೀಯರು ಮಹಾತ್ಮಾ ಗಾಂಧೀಕಿ ಜೈ ಎನ್ನುವ ಕಾಲವಿತ್ತು. ಸರೋಜಿನಿದೇವಿಯವರು 'ಗಾಂಧೀಜಿ ಬಹುರೂಪಿ' ಎಂದಿದ್ದಾರೆ. ಗಾಂಧೀಜಿಯವರನ್ನು ಇಂದೂ ವಿಶ್ವ ಗೌರವಿಸುತ್ತಿದೆ. ಭರತಖಂಡದ ಗೌರವವನ್ನು ಜಗತ್ತಿನಲ್ಲಿ ಎತ್ತಿ ಹಿಡಿದರು.

ಭರತಖಂಡದಲ್ಲಿ ಪ್ರತಿಭಾವಂತರಿಗೇನಂತ ಕೊರತೆ ಯಿಲ್ಲ. ಪ್ರಿನ್ಸಿಪಾಲರಾದ ವಿಲಿಯಂ ಹೇಸ್ಟಿಯವರು 'ನರೇಂದ್ರನದು ನಿಜ ವಾಗಿಯೂ ಅದ್ಭುತ ಪ್ರತಿಭೆ ಎಂದರು.

ನಾನು ಪ್ರಪಂಚದಲ್ಲಿ ಬೇಕಾದಷ್ಟು ಸಂಚಾರ ಮಾಡಿರುವೆನು. ಜರ್ಮನ್ ವಿಶ್ವ ವಿದ್ಯಾಲಯಗಳಲ್ಲಿ ತತ್ವಶಾಸ್ತ್ರ ಅಧ್ಯಯನ ಮಾಡುವ ವಿದ್ಯಾರ್ಥಿ ವರ್ಗದಲ್ಲಿ ಕೂಡ ಇಷ್ಟೊಂದು ಬುದ್ಧಿವಂತನಾದ ಹುಡುಗನನ್ನು ನಾನು ಕಂಡಿಲ್ಲ. ನರೇಂದ್ರ ಜೀವನದಲ್ಲಿ ಖ್ಯಾತಿಯನ್ನು ಗಳಿಸುವುದರಲ್ಲಿ ಸಂದೇಹವಿಲ್ಲ ಎಂದಿದ್ದಾರೆ. ಭಾರತ ಸರ್ವರಂಗಗಳಲ್ಲಿ ಒಂದು ಕಡೆ ಪ್ರಗತಿ ಸಾಧಿಸುತ್ತಿದ್ದರೆ, ಇನ್ನೊಂದೆಡೆ ಭಯೋತ್ಪಾದಕರು ಹೆಚ್ಚುತ್ತಿದ್ದಾರೆ. ಶ್ರೀಮಂತರಿಗೂ-ಬಡವರಿಗೂ ನೆಮ್ಮದಿಯಿಲ್ಲ.

ಭಾರತ ಸರ್ಕಾರದ ಪ್ರತಿಭಾವಂತರನನ್ನು ದೇಶದಲ್ಲಿಯೇ ಉಳಿಸಿ ಕೊಳ್ಳಬೇಕು. ಪ್ರತಿಭಾವಂತರು ಪರದೇಶಗಳಿಗೆ ಉದ್ಯೋಗ ಅರಸಿಹೋದರೆ ಭರತ ಖಂಡದ ಭವಿಷ್ಯವೇನು? ಈ ದೇಶ ವಿಶ್ವದಲ್ಲಿ ತಲೆ ಎತ್ತಿ ನಿಲ್ಲುವ ಬಗೆ ಹೇಗೆ? ನಮ್ಮ ಡಾಕ್ಟರುಗಳು, ಇಂಜಿನಿ ಯರುಗಳು, ವಿಜ್ಞಾನಿಗಳು, ಭರತಖಂಡದ ಸರ್ವಾಂಗೀಣ ಪ್ರಗತಿಗೆ ಕಂಕಣಬದ್ಧರಾಗದಿದ್ದರೆ ಈ ದೇಶದ ಪ್ರಗತಿ ಕನಸಿನ ಮಾತಾಗುತ್ತದೆ.

-ಕೆ.ಎನ್. ಸ್ವಾಮಿ, ದಾವಣಗೆರೆ.





## ಮನುಷ್ಯರೂ ಪ್ರಾಣಿಗಳೂ

-ಬಸವರಾಜ ಡೋಣೂರ, ಹಿರಿಯ ಪ್ರಾಧ್ಯಾಪಕರು, ಇಂಗ್ಲೀಷ್ ವಿಭಾಗ, ಕರ್ನಾಟಕ ಕಲಾ ಕಾಲೇಜು, ಧಾರವಾಡ-580 001

ಕಾಗೆಯ ಧ್ವನಿ ಕೋಗಿಲೆಯ ಧ್ವನಿಯಷ್ಟು ಮಧುರವಿಲ್ಲ. ಗೂಬೆಯ ಕಣ್ಣು ಚಿಗುರಿಯ ಕಣ್ಣಿನಷ್ಟು ಅಂದವಾಗಿಲ್ಲ. ನವಿಲಿನಂತೆ ಕತ್ತೆ ನಡೆಯುವುದಿಲ್ಲ, ಕುದುರೆಯಂತೆ ಕತ್ತೆ ಓಡುವುದಿಲ್ಲ. ಹೀಗೆ ಜಗತ್ತಿನಲ್ಲಿನ ಎಲ್ಲಾಪ್ರಾಣಿ, ಪಕ್ಷಿ, ಕ್ರಿಮಿ, ಕೀಟಗಳನ್ನು ಹೋಲಿಕೆ ಮಾಡುತ್ತೇವೆ. ಅವುಗಳನ್ನು ಎರಡು ವಿಧಗಳಲ್ಲಿ ವಿಂಗಡಣೆ ಮಾಡುತ್ತೇವೆ. ಅಂದವಾದವುಗಳು ಅಥವಾ ಅಮಂಗಳವಾದವುಗಳು ಅಥವಾ ಸುಂದರ ಮತ್ತು ಕುರೂಪಿ ಅಥವಾ ಉಪಯುಕ್ತ ಅಥವಾ ನಿರುಪಯುಕ್ತ. ಅಂದರೆ ನಮ್ಮ ಅಗತ್ಯಗಳ, ಅನುಕೂಲತೆಗಳ, ಬೇಡಿಕೆಗಳ ಹಿನ್ನಲೆಯಲ್ಲಿ ನಾವು ಅವುಗಳನ್ನು ವಿಂಗಡಣೆ ಮಾಡುತ್ತೇವೆ. ಆದರೆ ನಮ್ಮ ವಿಂಗಡಣೆಯ ಹಿಂದೆ ತಾರ್ಕಿಕತೆ, ವಿವೇಕ, ಬುದ್ಧಿವಂತಿಕೆ ಇದೆಯೆ?

ಮನುಷ್ಯರು ಕೋಗಿಲೆ, ಚಿಗುರೆ, ಮತ್ತು ನವಿಲುಗಳಂಥ ಪ್ರಾಣಿ-ಪಕ್ಷಿಗಳನ್ನು ಮೆಚ್ಚುತ್ತಾರೆ. ಅವುಗಳ ಸೌಂದರ್ಯ ಕೊಂಡಾಡುತ್ತಾರೆ. ಅವುಗಳ ಕುರಿತು ಕಥೆ, ಕವನ ಬರೆಯುತ್ತಾರೆ. ಅವರಿಗೆ ಪ್ರಿಯರಾದವರನ್ನು ಈ ಪ್ರಾಣಿ ಪಕ್ಷಿಗಳಿಗೆ ಹೋಲಿಸಿ ಖುಷಿ ಪಡುತ್ತಾರೆ. ಅದರೆ ಅವರು ಕಾಗೆ, ಗೂಬೆ ಮತ್ತು ಕತ್ತೆಗಳನ್ನು ದ್ವೇಷಿಸುತ್ತಾರೆ. ಅವರು ಇಷ್ಟಪಡದ ವ್ಯಕ್ತಿಗಳನ್ನು ಈ ಪ್ರಾಣಿಗಳಿಗೆ ಹೋಲಿಸಿ ತಮ್ಮಲ್ಲಿಯ ಅಹಂಅನ್ನು ತೃಪ್ತಿಪಡಿಸಿಕೊಳ್ಳುತ್ತಾರೆ; ಅವರನ್ನು ವ್ಯಂಗ್ಯ ಮಾಡಿ ಆನಂದಪಡುತ್ತಾರೆ.

ಆದರೆ ಈ ರೀತಿಯ ಹೋಲಿಕೆ ಸರಿಯಾದುದೆ? ಹೀಗೆ ಮಾಡುವುದರಿಂದ ನಾವು ಈ ಪ್ರಾಣಿ ಪಕ್ಷಿಗಳಿಗೆ ಅನ್ಯಾಯ ಮಾಡಿದಂತಾಗುವುದಿಲ್ಲವೇ? ನಮಗೆ ಮಾತನಾಡಲು ಬರುತ್ತದೆಂದು ನಮಗೆ ಹೊಳೆದದ್ದನ್ನೆಲ್ಲಾ ಹೇಳುತ್ತೇವೆ ಮತ್ತು ನಾವು ಹೇಳಿದ್ದೇ ಕೊನೆಯ ಮಾತು ಎಂದು ಸಾಧಿಸುತ್ತೇವೆ. ಹಾಗೆಯೇ ಬರಹ ಕರಗತ ಮಾಡಿಕೊಂಡಿದ್ದುದರಿಂದ ಕಲ್ಪನೆಗೆ ಹೊಳೆದ ವಸ್ತುಗಳ ಕುರಿತು ಬರೆಯುತ್ತೇವೆ. ಆದರೆ ಮಾತಿನಮೂಲಕ, ಬರಹದ ಮೂಲಕ ಹೇಳಲು ಹೊರಟಿರುವುದು ಸಂಪೂರ್ಣ ಸತ್ಯವೋ ಅಲ್ಲವೋ ಎಂಬುದನ್ನು ನಾವು ಪರಿಶೀಲಿಸುವುದಿಲ್ಲ. ಏಕೆಂದರೆ ಮಾತನಾಡುವ, ಬರೆಯುವ ಕಲೆ ಮನುಷ್ಯನಿಗೆ ಮಾತ್ರ ಗೊತ್ತಿರುವುದರಿಂದ ಅವನು ಹೇಳಿದ್ದೇ ಅಥವಾ ಬರೆದಿದ್ದೇ ಅಂತಿಮವಾಗಿ ಬಿಡುತ್ತದೆ.

ಈಗ ಆರಂಭದಲ್ಲಿ ಪ್ರಸ್ತಾಪಿಸಿದ್ದ ಪ್ರಾಣಿ ಪಕ್ಷಿಗಳನ್ನೇ ಚರ್ಚೆಗೆ ಎತ್ತಿಕೊಳ್ಳೀಣ. ಕೋಗಿಲೆಯ ಧ್ವನಿ ಇಂಪಾಗಿರುತ್ತದೆ. ಕಾಗೆಯ ಧ್ವನಿ ಕರ್ಕಶವಾಗಿರುತ್ತದೆಂದು ನಾವು ಹೇಳುತ್ತೇವೆ. ಕಾಗೆಯ ಧ್ವನಿಯಲ್ಲಿಯೂ ಮಧುರತೆ ಯಾಕಿರಬಾರದು? ಅದರ ಧ್ವನಿಯನ್ನು ಸವಿಯುವ ಹೃದಯವಂತಿಕೆ ನಮಗಿಲ್ಲವೆಂದು ನಾವು ಯಾಕೆ ಅಂದಿಕೊಳ್ಳುವುದಿಲ್ಲ? ಕಾಗೆಯ ಧ್ವನಿ ಕೆಟ್ಟದಾಗಿದ್ದರೆ, ಅದಕ್ಕೆ ಆ ಪಕ್ಷಿ ಹೇಗೆ ಹೊಣೆಯಾಗುತ್ತದೆ? ಅದರ ಧ್ವನಿ ಚೆನ್ನಾಗಿಲ್ಲವೆಂದು ಹೇಳಲು ನಮಗಿರುವ ಮಾನದಂಡಗಳಾವುವು? ಕಾಗೆ ಎಂದಾದರೂ ತನ್ನ ಧ್ವನಿ ಇಂಪಾಗಿಲ್ಲವೆಂದು ಹೇಳುತ್ತದಯೆ? ಅಥವಾ ಬೇರೆ ಪಕ್ಷಿಗಳು ಹಾಗೆ ಹೇಳುತ್ತವೆಯೇ? ಕಾಗೆಯ ಧ್ವನಿ ಇಂಪಾಗಿಲ್ಲವೆಂದರೆ ಅದು ಏಕಪಕ್ಷೀಯವಾದ ನಿರ್ಣಯವಾಗುವುದಿಲ್ಲವೆ? ಹಾಗೆಯೇ ಗೂಬೆ ತನ್ನ ಕಣ್ಣನ್ನು, ಕತ್ತೆ ತನ್ನ ನಡಿಗೆಯನ್ನು ಗೇಲಿ ಮಾಡಿಕೊಳ್ಳುವುದಿಲ್ಲ. ನಮ್ಮ ಅಲ್ಪಮತಿಯಿಂದಾಗಿ ನಾವು ಪ್ರಾಣಿ ಪಕ್ಷಿಗಳಲ್ಲಿ ಅವುಗಳಲ್ಲಿ ಇರದೇ ಇರುವ ಲಕ್ಷಣಗಳನ್ನು ಕಾಣಲು ಹೆಣಗುತ್ತೇವೆ.

ಕಾಗೆ, ಕತ್ತೆಯೆಂಥ ಪ್ರಾಣಿ-ಪಕ್ಷಿಗಳ ಕುರಿತು ಕೊಂಚ ಮುಕ್ತವಾಗಿ ಆಲೋಚನೆ ಮಾಡಿದರೆ ನಮಗೆ ಅವುಗಳ ನಿಜ ಸ್ವರೂಪ ಅರ್ಥವಾಗುವುದು ನಿಶ್ಚಿತ. ಕಾಗೆಗೆ ಸಮಷ್ಟಿ ಪ್ರಜ್ಞೆ ಇದೆ. ಕಾರ್ಲ್‌ಮಾರ್ಕ್ಸ್ ಹೇಳಿದ್ದನ್ನು ಕಾಗೆ ಎಂದಿ ನಿಂದಲೂ ಮಾಡುತ್ತ ಬಂದಿದೆ. ಅಂತೆಯೇ ಬಸವಣ್ಣ 'ಕಾಗೆ ಒಂದಗುಳ ಕಂಡರೆ ಕರೆಯದೆ ತನ್ನ ಬಳಗವನ್ನು? ಕೋಳಿ ಒಂದು ಕುಟುಕ ಕಂಡರೆ ಕೂಗಿ ಕರೆಯದೆ ತನ್ನ ಕುಲವನೆಲ್ಲವ? ಶಿವಭಕ್ತನಾಗಿ ಭಕ್ತಿಯ ಪಕ್ಷವಿಲ್ಲದಿದ್ದಡೆ ಕಾಗೆ ಕೋಳಿಯಿಂದ ಕರಕಷ್ಟ ಕೂಡಲಸಂಗಮದೇವ' ಎಂದು ಹೇಳಿದ್ದಾನೆ.

ಕತ್ತೆ ಅತ್ಯಂತ ಶ್ರಮ ಜೀವಿ. ಅದಕ್ಕಿರುವ ಸಮಯ ಪ್ರಜ್ಞೆ ಮನುಷ್ಯನಿಗಿದೆಯೆ? ಕೆಲವರು ತಮ್ಮ ಜೀವನೋಪಾಯಕ್ಕೆ ಇಂದಿಗೂ ಕತ್ತೆಯನ್ನು ಅವಲಂಬಿಸಿದ್ದಾರೆ. ವ್ಯಾಪಾರ, ವಹಿವಾಟುಗಳಲ್ಲಿ ಕತ್ತೆ ಮಹತ್ವದ ಪಾತ್ರ ವಹಿಸಿದ್ದನ್ನು ಮರೆಯಲು ಸಾಧ್ಯವೇ?

ಮನುಷ್ಯರಲ್ಲಿ ಸಮಷ್ಟಿ ಪ್ರಜ್ಞೆ ಯಾವ ಮಟ್ಟದಲ್ಲಿದೆ? ಧರ್ಮ, ಜಾತಿ, ಮತ, ಭಾಷೆ, ಬಣ್ಣ, ಶ್ರೀಮಂತಿಕೆ, ಬುದ್ಧಿವಂತಿಕೆ ಮುಂತಾದುವುಗಳ ಆಧಾರದ ಮೇಲೆ ಮನುಷ್ಯರು ಪರಸ್ಪರ ಭಿನ್ನರಾಗಿ ನಿಲ್ಲುತ್ತಾರೆ. ಆ ಕಾರಣಕ್ಕಾಗಿ ಪರಸ್ಪರ ದ್ವೇಷಿಸುತ್ತಾರೆ ಮತ್ತು ಹಿಂಸಿಸುತ್ತಾರೆ.

ಆದರೆ ಒಂದು ಪ್ರಾಣಿ ಅಥವಾ ಪಕ್ಷಿ ಸಾಮಾನ್ಯವಾಗಿ ತನ್ನ ಕುಲಕ್ಕೆ ಸೇರಿದ ಇನ್ನೊಂದು ಪ್ರಾಣಿ ಅಥವಾ ಪಕ್ಷಿಯನ್ನು ದ್ವೇಷಿಸುವುದಿಲ್ಲ. ಆಹಾರ, ಮೈಥುನಕ್ಕಾಗಿ ಅವು ಪರಸ್ಪರ ಕಚ್ಚಾಡಬಹುದು. ಆದರೆ ಈ ಕಚ್ಚಾಟ, ಹಿಂಸೆ ತಾತ್ಕಾಲಿಕ ವಾದದ್ದು. ಅಲ್ಲದೆ ಅವುಗಳ ಮಧ್ಯ ಪರಸ್ಪರ ಕಚ್ಚಾಟ ಅಥವಾ ಹೋರಾಟ ನಡೆದರೂ ಅದು ಆ ಪ್ರಾಣಿಯ ಅಥವಾ ಪಕ್ಷಿಯ ಇಡೀ ಕುಲವನ್ನೇ ಸರ್ವನಾಶ ಮಾಡುವಷ್ಟು ಪ್ರಬಲವಾಗಿರುವುದಿಲ್ಲ. ಆದರೆ ಮನುಷ್ಯರು ಭಯಂಕರವಾದ ಯುದ್ಧಗಳನ್ನು ಮಾಡಿ ಒಂದೊಂದು ದೇಶವನ್ನೇ ಧ್ವಂಸ ಮಾಡುತ್ತಾರೆ. ಮನುಷ್ಯನ ಇತಿಹಾಸದ ಪ್ರತಿಪುಟವೂ ಯುದ್ಧದ ರೋಚಕ ಕಥೆಗಳನ್ನೇ ಹೇಳುತ್ತದೆ! ಯುದ್ಧ ಭಯಂಕರ ದೃಶ್ಯವನ್ನೇ ನಮ್ಮೆದುರು ತೆರೆದಿಡುತ್ತದೆ!! ಹಿಟ್ಲರನಂಥ ಒಬ್ಬ ಸರ್ವಾಧಿಕಾರಿ, ಲ್ಯಾಡನ್‌ನಂಥ ಒಬ್ಬ ಧರ್ಮಾಂಧ ಇಡೀ ವಿಶ್ವನ್ನೇ ಸುಟ್ಟುಹಾಕಬಹುದು.

ವಸ್ತುಸ್ಥಿತಿ ಹೀಗಿರುವಾಗ ಮನುಷ್ಯ, ಪ್ರಾಣಿ-ಪಕ್ಷಿಗಿಂತ ಉನ್ನತ ಮಟ್ಟದ ಜೀವಿಯಾಗಿದ್ದಾನೆಂದು ಹೇಗೆ ಹೇಳುವುದು?

ಮನುಷ್ಯ ತನ್ನ ವ್ಯಕ್ತಿತ್ವದಲ್ಲಿನ ಕೊರತೆಗಳನ್ನು, ತನ್ನಲ್ಲಿಯ ದುಷ್ಟತನ, ಕ್ರೂರತನವನ್ನು, ಪ್ರಾಣಿ-ಪಕ್ಷಿಗಳ ಮೇಲೆ ಆರೋಪ ಮಾಡುತ್ತಾನೆ. ಉದಾಹರಣೆಗಾಗಿ ನಾವು ಹುಲಿಯನ್ನು ಕ್ರೂರ ಪ್ರಾಣಿಎಂತಲೂ, ಹಾವನ್ನು ವಿಷಜಂತು ಎಂತಲೂ ಬಣ್ಣಿಸುತ್ತೇವೆ. ಇದು ನಿಜವೇ? ಹುಲಿ ನಿಜಕ್ಕೂ ಕ್ರೂರ ಪ್ರಾಣಿಯೇ? ಹಾವು ನಿಜಕ್ಕೂ ವಿಷ ಜಂತುವೇ? ಹುಲಿಗಳು ಎಷ್ಟು ಜನ ಮನುಷ್ಯರನ್ನು ಕೊಂದಿವೆ? ಹಾವು ಎಷ್ಟು ಜನರನ್ನು ಕಚ್ಚಿ ಸಾಯಿಸಿವೆ? ಈ ಪ್ರಶ್ನೆಗಳಿಗೆ ಉತ್ತರ ಹುಡುಕುವ ಮೊದಲು ನಾವು ಇನ್ನೆರಡು ಪ್ರಶ್ನೆಗಳನ್ನು ಕೇಳಿಕೊಳ್ಳಬೇಕು. ಅವುಗಳೆಂದರೆ ಮನುಷ್ಯರು ಎಷ್ಟು ಹುಲಿಗಳನ್ನು ಕೊಂದಿದ್ದಾರೆ? ಎಷ್ಟು ಹಾವುಗಳನ್ನು ಸಾಯಿಸಿದ್ದಾರೆ? ಎಂಬುವು. ಮನುಷ್ಯರಿಂದಾಗಿ ಹುಲಿಯ ಸಂತತಿ ಅಳಿದು ಹೋರಟಿದೆ; ಎಷ್ಟೋ ಜಾತಿಯ ಹಾವುಗಳು ಅಳಿದು ಹೋಗಿವೆ. ಪ್ರಾಣಿಗಳು ಹೊಟ್ಟೆಗಾಗಿ ಬೇಟೆಯಾಡಿದರೆ ಮನುಷ್ಯರು ಮನರಂಜನೆಗಾಗಿ ಬೇಟೆಯಾಡುತ್ತಾರೆ. ಮಾಂಸ ತಿನ್ನದಿ ದ್ದರೂ ಮನುಷ್ಯ ಬದುಕಬಹುದು. ಆದರೆ ನಾಲಗೆಯ ರುಚಿಗಾಗಿ ಪ್ರಾಣಿ-ಪಕ್ಷಿಗಳ ಸಂತತಿಯನ್ನು ಮನುಷ್ಯರು ನಾಶ ಮಾಡಿದ್ದಾರೆ. ಈಗ ನಾವು ನಮ್ಮನ್ನೇ ಕೇಳಿಕೊಳ್ಳಬೇಕು; ನಿಜವಾದ ಕ್ರೂರ ಪ್ರಾಣಿ ಯಾವುದು? ವಿಷಜಂತು ಯಾರು? ಎಂದು.

ಪ್ರಾಣಿ-ಪಕ್ಷಿಗಳ ಜಗತ್ತು ಮನುಷ್ಯನ ಜಗತ್ತಿಗಿಂತ ಹೆಚ್ಚು ವೈವಿಧ್ಯಮಯವೂ ಸುಂದರವೂ ಆಗಿದೆ. ಅವುಗಳಿಗೆ ತಮ್ಮದೇ ಆದ ಧರ್ಮವಿದೆ, ನೀತಿ-ನಿಯಮಗಳಿವೆ. ಆದರೆ ಅವುಗಳ ಧರ್ಮ, ನೀತಿ, ನಿಯಮದ ಕುರಿತಾಗಿ ಭಾಷಣ ಮಾಡುತ್ತಾನೆ., ಬರಹ ಕೈಕೊಳ್ಳುತ್ತಾನೆ, ಆದರೆ ಅವುಗಳನ್ನು ನಿಜವಾದ ಅರ್ಥದಲ್ಲಿ ಅನುಸರಿಸುವುದಿಲ್ಲ, ಪ್ರಾಣಿ-ಪಕ್ಷಿಗಳು ಇದಕ್ಕೆ ತದ್ವಿರುದ್ಧವಾಗಿವೆ.

ಈಗ ನಾವು ಇನ್ನೆರಡು ಪ್ರಶ್ನೆಗಳನ್ನು ಕೇಳಿಕೊಳ್ಳಬೇಕಿದೆ. ಹುಲಿಗೆ ಕ್ರೂರಪ್ರಾಣಿ ಎಂತಲೂ ಹಾವಿಗೆ ವಿಷಜಂತು ಎಂತಲೂ ಕರೆದವರು ಯಾರು? ಭಾಷೆ ಬಲ್ಲ ಮನುಷ್ಯ ನಲ್ಲವೇ? ತನ್ನನ್ನು ಹೃದಯವಂತ, ಕರುಣಾಮಯಿ, ದಾನಶೂರ ಎಂದು ಕರೆದುಕೊಂಡವನೂ ಮನುಷ್ಯನೆ! ಬೇರೆ ಇನ್ನಾವುದೇ ಪ್ರಾಣಿ ಅಥವಾ ಪಕ್ಷಿ ಆತನನ್ನು ಕರುಣಾಮಯಿ, ಹೃದಯವಂತನೆಂದು ಕರೆದಿರುವುದೆ? ಒಂದು ವೇಳೆ ಪ್ರಾಣಿಪಕ್ಷಿಗಳಿಗೆ ಮಾತು ಬರುತ್ತಿದ್ದರೆ ಅವು ಮನುಷ್ಯನನ್ನು ಅತ್ಯಂತ ಕ್ರೂರ ಪ್ರಾಣಿ ಎಂತಲೂ, ಹೃದಯ ಹೀನ, ಕಪಟ, ವಿಷಯಲಂಪಟನೆಂತಲೂ ಬಣ್ಣಿಸುತ್ತಿದ್ದವು!

ಪ್ರಾಣಿ-ಪಕ್ಷಿಗಳ ಜಗತ್ತಿನ ಮೇಲೆ ದಾಳಿ ಮಾಡಿರುವ ಮನುಷ್ಯ ಅವುಗಳ ದೃಷ್ಟಿಯಲ್ಲಿ ಬಹುದೊಡ್ಡ ಆತಂಕವಾದಿ ಯಾಗಿದ್ದಾನೆ. ಆತ ಇಡೀ ಭೂಮಂಡಲದ ಸಾರ್ವಭೌಮ ನಂತೆ ವರ್ತಿಸುತ್ತಿದ್ದಾನೆ. ಪ್ರಾಣಿ-ಪಕ್ಷಿಗಳು ಅವನ ಭೋಗದ ವಸ್ತುಗಳೆಂದು ಅವನು ಭಾವಿಸಿದ್ದಾನೆ. ಆದರೆ ಎಲ್ಲ ಪ್ರಾಣಿ-ಪಕ್ಷಿಗಳಿಗೂ, ಕ್ರಿಮಿ-ಕೀಟಗಳಿಗೂ ಈ ಜಗತ್ತಿನಲ್ಲಿ ಬದುಕುವ ಹಕ್ಕು ಇದೆ. ಹಾಗೆಯೇ ಬೆಟ್ಟ-ಗುಡ್ಡ, ಹಿಮ-ಪರ್ವತ, ಹಳ್ಳ-ಕೊಳ್ಳ, ನದಿ-ಸಾಗರ, ಅರಣ್ಯ ಪ್ರತಿಯೊಂದಕ್ಕೂ ಪ್ರಕೃತಿಯಲ್ಲಿ ತನ್ನದೇ ಆದ ಸ್ಥಾನವಿದೆ. ಆದರೆ ಮನುಷ್ಯ ಎಲ್ಲದರ ಹಕ್ಕನ್ನು ಕಬಳಿಸುತ್ತಿದ್ದಾನೆ. ಎಲ್ಲವನ್ನು ತನ್ನ ಕೈಗೊಂಬೆ ಯಂತೆ ಕಾಣುತ್ತಿದ್ದಾನೆ. ಇದಕ್ಕಾಗಿ ಆತ ಬಹುದೊಡ್ಡ ಬೆಲೆ ಕೊಡಬೇಕಾಗಿ ಬರುತ್ತದೆ. ಆ ಕಾಲ ಬಹಳ ದೂರಿಲ್ಲ.

ಮನುಷ್ಯ ತನ್ನನ್ನು ತಾನು ಬಣ್ಣಿಸಿಕೊಳ್ಳುವಂತೆ ಹೃದಯ ವಂತನೂ, ಕರುಣಾಮಯಿಯೂ ಆಗಿದ್ದಲ್ಲಿ ಬೇರೆ ಪ್ರಾಣಿ-ಪಕ್ಷಿಗಳೊಂದಿಗೆ, ಕ್ರಿಮಿ-ಕೀಟಗಳೊಂದಿಗೆ, ನೈಸರ್ಗಿಕ ಶಕ್ತಿಗಳೊಂದಿಗೆ ಸಾಮರಸ್ಯದಿಂದ ಬದುಕುವುದನ್ನು ಕಲಿಯ ಬೇಕು. ಬೇರೆ ಪ್ರಾಣಿ-ಪಕ್ಷಿಗಳ, ಕ್ರಿಮಿ-ಕೀಟಗಳ ಹಾಗೂ ನೈಸರ್ಗಿಕ ಶಕ್ತಿಗಳ ಮೇಲಣ ಪ್ರೀತಿಯಿಂದಾಗಿ ಆತ ಹೀಗೆ ಮಾಡದಿದ್ದರೂ ತನ್ನ ಭಾವಿ ಜನಾಂಗದ ಕಲ್ಯಾಣಕ್ಕಾಗಿ ಹೀಗೆ ಮಾಡಬೇಕಿದೆ. ಇಲ್ಲದಿದ್ದಲ್ಲಿ ಮನುಷ್ಯನಿಂದಾಗಿ ಇಡೀ ಭೂಮಂಡಲ ಧ್ವಂಸವಾಗಿ ಹೋಗುವುದರಲ್ಲಿ ಸಂದೇಹವೇ ಇಲ್ಲ.

*





# ಆರೋಗ್ಯ, ಆದಿತ್ಯನ ಆಶೀರ್ವಾದ -ತೇಜೋತತ್ವ

-ಜಿ.ವಿ.ವಿ. ಶಾಸ್ತ್ರಿ
'ನಿಸರ್ಗ ಯೋಗಧಾಮ' ನಂ. ೨/೨೦೫೫, ೧೧ನೇ ಕ್ರಾಸ್,
ಎಸ್.ಎಸ್.ಪುರಂ, ತುಮಕೂರು -೫೭೨ ೧೦೨.

- ಮುಂದುವರೆದ ಭಾಗ

*ಬೆಳಗಾಯಿತು ಬೆಳಕು ಭೂಮಿಗೆ ಇಳಿಯಿತು*
*ಒಮ್ಮೆಗೆ ಚಿಮ್ಮಿತು ಚೈತನ್ಯದ ಬುಗ್ಗೆ*
*ಅರುಣೋದಯ ಹಾಕಿತು ಕತ್ತಲೆಗೆ ಲಗ್ಗೆ*
*ಹಕ್ಕಿಗಳ ಚಿಲಿಪಿಲಿಗುಟ್ಟುವ ನಾದ ಮೂಡಣದಲಿ*
*ಮೂಡುವುದು ಬಣ್ಣಗಳ ಸಂವಾದ ಅಂಗಳದ ಕರುವು*
*ಕುಣಿಯಿತು ಮನವು ಮುಗಿಲೆತ್ತರಕೆ ಏರಿತು*
*ಕಣ್ಣುಗಳು ಸಾರ್ಥಕವಾಯಿತು*
*ಸೂರ್ಯ - ಸಕಲ ಚೈತನ್ಯಗಳ ಚಿಲುಮೆ*
*ನಮ್ಮ ಸರ್ವಸ್ವವೂ ಅವನ ಒಲುಮೆ*
*ಅವನೇ ನಮ್ಮ ಕಣ್ಣಿಗೆ ಕಾಣುವ ದೇವರು*
*ನಮ್ಮ ಆರೋಗ್ಯಕೆ ಕಾರಣ ಅವನು ನಮ್ಮಿಂದ ಬೀಳಿಸುವ*
*ಬೆವರು ವೈಜ್ಞಾನಿಕವಾಗಿ ಅವನೊಂದು ನಕ್ಷತ್ರ*
*ನಿಜಾರ್ಥದಲ್ಲಿ ಅವನು ನಮ್ಮ 'ಮಿತ್ರ'*
*ಅವನು ಆರೋಗ್ಯದಾಯಕ ಹಾಗೂ ರೋಗನಿವಾರಕ*
*ಎರಡಕೂ ಬೇಕವನ ಸಹಾಯ*
*ಅವನಿಲ್ಲದೇ ನಡೆಯದು ಬೇರೆಯ ಉಪಾಯ*
*ಅದಕೇ ಅವನಿಗೆ ಮೊದಲ ನಮಸ್ಕಾರ*
*ನಂತರ ನಮ್ಮ ಎಲ್ಲಾ ಕಾರ್ಯಭಾರ*

ಮಾನವಪರಂಪರೆಯು ಸೂರ್ಯನ ಸುತ್ತಲೇ ಸುತ್ತಿತ್ತು. ಅವನನ್ನು ಸ್ತುತಿಸುತ್ತಲೇ ಬೆಳೆಯಿತು. ಇದು ಎಲ್ಲಾ ಜನಾಂಗಗಳ ಕತೆಯೂ ಹೌದು. ಈಜಿಪ್ಟಿನವರ 'ಅಮನ್‌ರಾ' ಬ್ಯಾಬಿಲೋನಿಯನ್ನರ 'ಮಾರ್ಡಕ್', ಗ್ರೀಕರ 'ಫ್ರೀಯಬಸ್' - ಎಲ್ಲವೂ ಸೂರ್ಯನ ಪ್ರತೀಕಗಳೇ. ಜಪಾನ್, ಚೀನಾ, ಇಂಕಾ, ಮಯಾನ್ ಸಂಸ್ಕೃತಿಗಳ ದಿವವೂ ರವಿಯೇ.

**ಶ್ರುತಿಯಲ್ಲಿ ಸೂರ್ಯ:**

ನಮ್ಮ ಆರಾಧ್ಯದೈವ ಸೂರ್ಯನೇ. ವೇದದ ಕಾಲ ದಿಂದಲೂ ಸೂರ್ಯನ ಮಹತ್ವದ ಅರಿವಿದೆ. ಹಿಂದೆ ಉಪಾಸನೆ ಎಂದರೆ ಸೂರ್ಯೋಪಾಸನೆಯೇ ಆಗಿತ್ತು. ಋಷಿಗಳು ಸೂರ್ಯನನ್ನು ಹಾಡಿ ಹೊಗಳಿದರು. ಅದಕ್ಕೆ ಕಾರಣವಿಲ್ಲದೇ ಇಲ್ಲ. ಹಗಲು, ರಾತ್ರಿ, ವಾರ, ವರ್ಷ, ಋತುಗಳು, ಮಳೆ-ಬೆಳೆ, ಸಕಲಕ್ಕೂ ಅವನೇ ಆಧಾರ. ಸೂರ್ಯನಿಲ್ಲದ ಜೀವನ ಕಲ್ಪನೆಗೂ ಸಾಧ್ಯವಿಲ್ಲ. ಸಕಲ ಕಾಲಕ್ಕೂ ಸೂರ್ಯನೇ ನಮ್ಮ ಸ್ಫೂರ್ತಿದಾಯಕ. ಪಂಚಭೂತಗಳಲ್ಲಿ ಮೂರನೆಯದಾದ ತೇಜೋತತ್ವಕ್ಕೆ ಅವನೇ ಜನಕ.

ವೇದ ಮಂತ್ರಗಳಲ್ಲಿ ಮೊದಲ ಸ್ಥಾನ ಗಾಯತ್ರೀ ಮಂತ್ರಕ್ಕೆ. ಅದರ ದೇವತೆ ಸವಿತೃ. 'ಷೂ ಪ್ರಸವೈಶ್ವರ್ಯಯೋಃ' ಎಂಬ ಧಾತುವಿನಿಂದ ಹುಟ್ಟಿದೆ. 'ಸೂ' ಎಂದರೆ ಜನ ಕೊಡು, ಸೃಷ್ಟಿಸು ಎಂದರ್ಥ. ಅವನೇ ನಮ್ಮೆಲ್ಲರ ಸೃಷ್ಟಿಗೂ ಕಾರಣ. ಸೂರ್ಯನ ಆರೋಗ್ಯದಾಯಕ, ಹಾಗೂ ರೋಗನಿವಾರಕ ಗುಣಗಳನ್ನು ವೇದಮಂತ್ರಗಳು ಹಾಡಿ ಹೊಗಳಿವೆ.

*ಸೂರ್ಯ ಆತ್ಮಾ ಜಗಸ್ಥಸ್ತುಷಶ್ಚ - ಋಗ್ವೇದ.*
*ಸೂರ್ಯನು ಜಗತ್ತಿನ ಆತ್ಮ*

*ಆರೋಗ್ಯಂ ಭಾಸ್ಕರಾದಿಚ್ಛೇತ್*
*ಆರೋಗ್ಯ ಸೂರ್ಯನ ವರ*

*ಚಕ್ಷೋ ಸೂರ್ಯ ಅಜಾಯತ*
ಪರಮಾತ್ಮನ ಕಣ್ಣುಗಳಿಂದ ಸೂರ್ಯನ ಜನನವಾಯಿತು. ಹಾಗೆಯೇ ಜಗತ್ತಿನ ಕಣ್ಣು ಅವನಾದ.

ವಿಶ್ವಾನಿದೇವ ಸೂರ್ಯನೇ! ನಮ್ಮ ಕಷ್ಟಗಳನ್ನು ಪರಿಹರಿಸು ನಮ್ಮ ಭದ್ರತೆಗಾಗಿ ಎಲ್ಲಾ ವಸ್ತುಗಳನ್ನೂ ಕೊಡು.

*ಉದ್ಯನಾದಿತ್ಯಃ ಕ್ರಿಮಿನ್ ಹಂತಿ- ಋಗ್ವೇದ*
ಉದಯಿಸುವ ಸೂರ್ಯನು ಕ್ರಿಮಿಗಳನ್ನು ನಾಶಮಾಡುತ್ತಾನೆ.

*ಉತ ಪುರಸ್ತಾತ್ ಸೂರ್ಯ ಏತಿ ವಿಶ್ವದೃಷ್ಟೋ ಅದೃಷ್ಟಃ।*
*ದೃಷ್ಟಾಂಶ್ಚ ಹ ಅದೃಷ್ಟಾಂಶ್ಚ ಸರ್ವಾಂಚ ಪ್ರಭ್ರುಣಂ ಕ್ರಿಮೀನ್॥*
-ಅಥರ್ವವೇದ

ಸೂರ್ಯೋದಯದ ನಂತರ ರೋಗೋತ್ಪಾದಕ, ಕಣ್ಣಿಗೇ ಕಾಣುವ ಹಾಗೂ ಕಾಣದ ಎಲ್ಲ ಕ್ರಿಮಿಗಳನ್ನೂ ಅವನ ಕಿರಣಗಳು ನಾಶಮಾಡುತ್ತವೆ.

*ಉದ್ಯನದ್ಯಮಿತ್ರಮಃ ಆರೋಗ್ಯನುತ್ತರಾಂ ದಿನಂ ।*
*ಹೃದ್ರೋಗಃ ಮಮ ಸೂರ್ಯ ಪರಿಮಾಣಂಚ ನಾಶಯ ॥*
*ಶುತೇಷುಮೇಃ ಹರಿಮಾಣಃ ರೂಪಣಾಕಸದಧ್ಮನಿ ।*
*ಅಥೋ ಹಾರಿದ್ರವೇಷುಮೆ ಹರಿಮಾಣ ನಿಧಧ್ಮನಿ ॥*

*ಉದಗಾದಯಮಾದಿತ್ಯೋವಿಶ್ವೇನ ಸಹಸಾಸಹ ।*
*ದ್ವಿಷಂ ತಮ್ ಮಹ್ಯಂ ರಂಧಯರ್ಮಾ ಅಹಂ ದ್ವಿಷತೇರಧಂ॥*
-ಋಗ್ವೇದ

ಓ ಸೂರ್ಯ ದೇವನೇ! ನೀನು ವಿಶ್ವಕ್ಕೆಲ್ಲಾ ಪ್ರೇರಕನಾಗಿದ್ದೀಯೇ. ಈಗ ಉದಯಿಸಿ, ಬಹು ಎತ್ತರಕ್ಕೆ ಏರುತ್ತಾ ನನ್ನ ಹೃದಯ ರೋಗವನ್ನೂ, ಹಳದೀ ಬಣ್ಣವನ್ನುಂಟುಮಾಡುವ ಕಾಮಾಲೆ, ತೊನ್ನು ಮುಂತಾದುವುಗಳನ್ನು ನಾಶ ಮಾಡು. ನನಗೆ ಅನಾನುಕೂಲವಾಗಿರುವ ಈ ದೇಹದ ಹಳದೀ ಬಣ್ಣವನ್ನು ಆ ಬಣ್ಣಕ್ಕೆ ಆಸೆ ಪಡುವ ಗಿಳಿ ಮತ್ತು ಅರಿಶಿಣದ ಗಿಡಗಳಲ್ಲಿ ಇಡು. ಸೂರ್ಯನು ತನ್ನ ಸಮಸ್ತ ಬಲದೊಂದಿಗೆ ನನ್ನ ರೋಗರೂಪವಾದ ಶತ್ರುವನ್ನು ನಾಶಮಾಡುತ್ತಾ ಉದಯಿಸುತ್ತಿದ್ದಾನೆ. ಆ ಶತ್ರುವನ್ನು ನಾಶಮಾಡಲು ನನಗೆ ಶಕ್ತಿ ಇಲ್ಲ. ಸೂರ್ಯನೇ ನಾಶಮಾಡಲಿ.

ಕಾವ್ಯಮಯವಾದ ಈ ಭಾಷೆ ಎಷ್ಟು ಸುಂದರ ಹಾಗೂ ಅರ್ಥಪೂರ್ಣವಾಗಿದೆ! ಸೂರ್ಯನ ರೋಗ ನಿವಾರಣ ಶಕ್ತಿಯನ್ನು ವರ್ಣಿಸುತ್ತದೆ. ಹೀಗೆ ಇನ್ನೂ ಅನೇಕ ಋಕ್ಕುಗಳು ಸೂರ್ಯನ ವರ್ಣನೆಗೆ ಮೀಸಲಾಗಿದೆ. ಈ ವಿಷಯದಲ್ಲಿ ಉಪನಿಷತ್ತೂ ಸಹ ಹಿಂದೆ ಬಿದ್ದಿಲ್ಲ.

*ಆದಿತ್ಯೋ ಹ ವೈ ಪ್ರಾಣಃ –*
*ಸೂರ್ಯನೇ ನಮ್ಮ ಪ್ರಾಣ. ಪ್ರಶ್ನೋಪನಿಷತ್*

ಆಯುರ್ವೇದದಲ್ಲಿ ಆದಿತ್ಯ :

ಆಯುರ್ವೇದದಲ್ಲಿನ ಸಲಹೆ, 'ಜಯೇತ್ ಅಲ್ಪ ಬಲಾನ್ ವ್ಯಾಧೀನ್ ವ್ಯಾಯಾಮಾತಪ ಮಾರುತೈಃ' – ವ್ಯಾಧಿಗೆ ಬಲ ಕಡಿಮೆಯಿದ್ದಾಗ ವ್ಯಾಯಾಮ, ಬಿಸಿಲು ಮತ್ತು ಗಾಳಿಯಿಂದ ಅದನ್ನು ಗೆಲ್ಲಬೇಕು. ಎಂತಹ ಸರಳವಾದ, ಸತ್ಯವಾದ ಸಲಹೆ! ಅಲ್ಲಿಂದ ಮುಂದುವರೆದು

*ಸೂರ್ಯ ಆತಪಃ ಸ್ವೇದಕೃತ್ ಸರ್ವರೋಗವಿನಾಶನಃ॥*
*ಮೇದಶ್ಛೇದಕರಶ್ಚೈವ ಬಲೋತ್ಸಾಹ ವಿವರ್ಧನಃ॥*

ಸೂರ್ಯನ ಬಿಸಿಲು ಬೆವರನ್ನು ಉಂಟು ಮಾಡಿ ಎಲ್ಲಾ ರೋಗಗಳನ್ನೂ ಕಳೆಯುವುದು. ಮುಖ್ಯವಾಗಿ ಮಿತಿಮೀರಿದ ಕೊಬ್ಬನ್ನು ಕರಗಿಸುವುದು. ಶರೀರದ ಬಲವನ್ನೂ ಮನಸ್ಸಿನ ಉತ್ಸಾಹವನ್ನೂ ಹೆಚ್ಚಿಸುವುದು.

*ದದ್ರು ವಿಸ್ಫೋಟಕುಷ್ಠಘ್ನಃ ಕಾಮಾಲಾ ಶೋಫನಾಶಕಃ॥*
*ಜ್ವರಾತಿಸಾರ ಶೂರಾಣಾಂ ಹಾರಕೋ ನಾತ್ರ ಸಂಶಯಃ॥*

ಬಿಸಿಲು– ಕಜ್ಜಿ, ಕುಷ್ಠ, ಕಾಮಾಲೆ, ಬಾವು, ಜ್ವರ, ಅತಿಸಾರ ಮುಂತಾದ ವಿವಿಧ ಪ್ರಕಾರದ ನೋವುಗಳನ್ನು ವಾಸಿ ಮಾಡುವುದರಲ್ಲಿ ಸಂಶಯವಿಲ್ಲ.

*ಕಫಪಿತ್ತಾಽಽಧ್ಭವಾನ್ ರೋಗಾನ್ ವಾತರೋಗಾಸ್ತಥೈವ ಚ ।*
*ತತೇವನಾತ್ ನರೋ ಜಿತ್ವಾ ಜೀವೇಚ್ಚ ಶರದಃ ಶತಂ॥*

ವಾತ, ಪಿತ್ತ, ಕಫ, ಈ ಮೂರರಲ್ಲಿ ಯಾವುದರ ಸಂಬಂಧ ವಾದ ರೋಗವಿದ್ದರೂ ಸಹ ಮನುಷ್ಯನು ಬಿಸಿಲಿನ ಸಹಾಯ ದಿಂದ ಅದನ್ನು ಗೆದ್ದು ನೂರು ವರ್ಷ ಬಾಳಬಹುದು.

ತೇಜೋತತ್ವ :

*ರೂಕ್ಷ ತೀಕ್ಷ್ಣೋಷ್ಣ ವಿಶದ ಸೂಕ್ಷ್ಮ ರೂಪ ಗುಣೋಲ್ಬಣಂ।*
*ಆಗ್ನೇಯಂ ದಾಹ ಭಾವರ್ಣ ಪ್ರಕಾಶಪಚನಾತ್ಮಕಂ॥*
–ಅಷ್ಟಾಂಗ ಹೃದಯ

ಒಣತನ, ತೀಕ್ಷ್ಣತೆ, ಬಿಸಿ, ವಿಶದತೆ(ಹರಡುವ ಗುಣ), ಸೂಕ್ಷ್ಮತೆ, ರೂಪ, ಇವುಗಳು ತೈಜಸ ದ್ರವ್ಯದಲ್ಲಿರುತ್ತವೆ. ಇದರ ಸೇವನೆಯಿಂದ ತನು–ಮನಗಳಲ್ಲಿ ಬಿಸಿ, ಬೆಳಕು, ಪ್ರಭೆ, ಬಣ್ಣ, ಅಜೀರ್ಣಶಕ್ತಿಗಳು ಉಂಟಾಗುತ್ತವೆ.

ಈ ಗುಣಗಳನ್ನು ಆರೋಗ್ಯದಲ್ಲಿ ಹಾಗೂ ರೋಗ ನಿವಾರಣೆಯಲ್ಲಿ ಬಳಸಿಕೊಳ್ಳಬೇಕು.

*ತಂದ್ರಾ ತೃಟ್ ದಾಹ ಪಾಮಜಿತ್* – ಅಷ್ಟಾಂಗ ಹೃದಯ

ನಿದ್ರೆಯನ್ನು ಕಳೆಯುವವನು, ಬಾಯಾರಿಕೆಯನ್ನು ಉಂಟು ಮಾಡುವವನು, ಪಾಪಗಳನ್ನು ಗೆಲ್ಲುವವನು – ಸೂರ್ಯ.

ವೇದ, ಆಯುರ್ವೇದ, ಉಪನಿಷತ್, ಪುರಾಣ, ರಾಮಾಯಣ, ಮಹಾಭಾರತಗಳಲ್ಲಿನ ಸೂರ್ಯನ ಪ್ರಾರ್ಥನೆ ಹಾಗೂ ಅವನ ಆರೋಗ್ಯದಾಯಕ, ರೋಗನಿವಾರಕ ಗುಣಗಳನ್ನು ಹಾಡಿಹೊಗಳಿದ್ದಾರೆ.

ತತ್ವ, ಉಪಾಸನೆ, ಆಚರಣೆಗಳ ಒಗ್ಗೂಡುವಿಕೆಯೇ ಸೂರ್ಯನಮಸ್ಕಾರ. ಭಾರತೀಯ ಋಷಿ ಪರಂಪರೆಯು ನೀಡಿರುವ ಸುವರ್ಣಪುಷ್ಪ ಇದು ಬರೀ ಒಂದು ಶಾರೀರಿಕ ವ್ಯಾಯಾಮವಲ್ಲ. ಶರೀರದಿಂದ ಪ್ರಾರಂಭವಾಗಿ ಮನಸ್ಸಿನ ಮುಖಾಂತರ ಆಧ್ಯಾತ್ಮಿಕ ಜಗತ್ತಿಗೂ ವಿಸ್ತರಗೊಳ್ಳುವ ಒಂದು ಪ್ರಕ್ರಿಯೆ. ಶಾರೀರಿಕ ಶ್ರಮವಿಲ್ಲದ, ಮಾನಸಿಕ ತೊಳಲಾಟದ ಇಂದಿನ ಬದುಕಿಗೆ ಇದೊಂದು ಕಾಮಧೇನು.

–ಮುಂದುವರೆಯುತ್ತದೆ.





## ಶ್ರೀ ಸಿದ್ಧಗಂಗಾ ಮಠದ ಶಾಶ್ವತ ದಾಸೋಹ ನಿಧಿಗೆ ಉದಾರವಾಗಿ ಕಾಣಿಕೆ ನೀಡಿದ ಮಹನೀಯರುಗಳು

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 4508. | **Mrs. Nalini Siddalingeshwara Orekundy** No. 30, LLADILO AVE, Stralthi, Field, N.S.W. 2135, Australia. | 2,002.00 |
| 4509. | ಶ್ರೀಮತಿ ಲಕ್ಷ್ಮೀದೇವಮ್ಮ ಆರ್. ನಾರಾಯಣಸ್ವಾಮಿ ಮತ್ತು ಕುಟುಂಬವರ್ಗ, ನೆಲಗುಲಿ, ಬೋಲರೆ ಅಂಚೆ, ಉತ್ತರಹಳ್ಳಿ, ಬೆಂ.ಗ್ರಾ.ಜಿಲ್ಲೆ. | 1,00,116.00 |
| 4510. | ಶ್ರೀ ಎ. ಭೂಪತಿ ಆರಾಧ್ಯ ಬಿನ್ ಎ.ಎನ್. ಚಿಕ್ಕಣ್ಣಾರಾಧ್ಯ ಕೆ.ಆರ್. ಬಡಾವಣೆ, 5ನೇ ಮುಖ್ಯರಸ್ತೆ, ತಿಪಟೂರು. | 2,001.00 |
| 4511. | ಶ್ರೀ ಕೆ. ತಿಮ್ಮೇಗೌಡ ಅರಕೆರೆ, ಬಿ.ಜಿ ರಸ್ತೆ, ಬೆಂಗಳೂರು. | 2,001.00 |
| 4512. | ಶ್ರೀ ಕೆ.ಎನ್. ಶಾಂತರಾಜು ಕೆಂಪಾಂಬ ಲಾಡ್ಜ್, ಗಾಂಧಿನಗರ, ಬೆಂಗಳೂರು. | 25,000.00 |
| 4513. | ಶ್ರೀ ಶಾರದ ಕೋಂ. ಲಿಂ. ಚನ್ನಬಸಪ್ಪ 10ನೇ ಕ್ರಾಸ್, ರಾಜಮಹಲ್ ವಿಲಾಸ್, ಬೆಂಗಳೂರು. | 25,000.00 |
| 4514. | ಶ್ರೀ ಎಸ್. ಶಿವಲಿಂಗಯ್ಯ, ಗಂಗಾಧರೇಶ್ವರ ಎಂಟರ್‌ಪ್ರೈಸಸ್, ಬಟವಾಡಿ. ತುಮಕೂರು. | 5,000.00 |
| 4515. | ಶ್ರೀ ಬಸವರಾಜ ಯಲ್ಲಪ್ಪ ಗೌರಕ್ಕನವರ್ ಕಲ್ಯಾಣನಗರ್, ವಿದ್ಯಾನಗರ, ಬೆಂಗಳೂರು. | 1,001.00 |
| 4516. | ಶ್ರೀ ಡಿ. ವಿಜಯಸಾಯಿರೆಡ್ಡಿ ಏರ್‌ಪೋರ್ಟ್ ರಸ್ತೆ, ಬೆಂಗಳೂರು. | 2,001.00 |
| 4517. | ಶ್ರೀ ಎ.ಸಿ. ಶಾಂತಮಲ್ಲೇಗೌಡ ಪಿ.ಬಿ.ನಂ. 61, ಚಿಕ್ಕಮಗಳೂರು. | 1,00,001.00 |
| 4518. | ಶ್ರೀ ಎಂ.ಡಿ. ಪುಟ್ಟಸ್ವಾಮಿಗೌಡ ಮಾವಿನಹಳ್ಳಿ, ಚಿಕ್ಕಮಗಳೂರು ತಾ॥ | 50,000.00 |
| 4519. | ಡಾ॥ ನಿಯಾತ್ ಬಸವೇಶ್ವರ ಕ್ಲಿನಿಕ್, ಚಿಕ್ಕಮಗಳೂರು. | 5,001.00 |
| 4520. | ಶ್ರೀ ಎ.ಎನ್. ನಂಜುಂಡಸ್ವಾಮಿ ರಾಘವೇಂದ್ರಸ್ವಾಮಿ ಮಠದ ರಸ್ತೆ, ಚಿಕ್ಕಮಗಳೂರು. | 20,101.00 |
| 4521. | ಮುಖ್ಯ ಶಿಕ್ಷಕರು, ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆ, ಶ್ರೀಮಠ. ತುಮಕೂರು. | 14,000.00 |
| 4522. | ಶ್ರೀ ಚಂದ್ರಪ್ಪ ಬಿ.ಟಿ.ಎಂ. ಲೇಔಟ್, 2ನೇ ಸ್ಟೇಜ್, ಬೆಂಗಳೂರು. | 5,001.00 |
| 4523. | ಶ್ರೀಮತಿ ವಿಜಯರತ್ನ ಮತ್ತು ಎ. ಗಂಗಾಧರಯ್ಯ ಶಿರಗನಹಳ್ಳಿ, ಬಾಣವಾಡಿ ಅಂ, ಮಾಗಡಿ ತಾ॥ | 10,002.00 |
| 4524. | ಶ್ರೀಮತಿ ಬಸಮ್ಮ ಕೋಂ. ಚಂದ್ರಶೇಖರಪ್ಪ ಆರ್. ಪಾಟೀಲ್ ಶಿರವಾರ ಅಂಚೆ, ರಾಯಚೂರು ಜಿಲ್ಲೆ. | 4,000.00 |
| 4525. | ಶ್ರೀಮತಿ ಧನಲಕ್ಷ್ಮಿ ಕೇರಾಫ್ ಎನ್.ವಿ. ಪ್ರಭಾಕರ್ 2ನೇ ಹಂತ, ರಾಜಾಜಿನಗರ, ಬೆಂಗಳೂರು. | 10,002.00 |
| 4526. | ಶ್ರೀ ಜಿ.ಬಿ. ವಾಮದೇವ್ ಗೃಹಲಕ್ಷ್ಮಿ ಅಪಾರ್ಟ್‌ಮೆಂಟ್, ಜಾಲಹಳ್ಳಿ, ಬೆಂಗಳೂರು. | 2,001.00 |
| 4527. | ಶ್ರೀ ಬಿ.ಎಲ್. ಗುರುಪ್ರಸಾದ್, ಕಾಫಿ ಪ್ಲಾಂಟರ್ ಚಿಕ್ಕುಡುವೆ ಎಸ್ಟೇಟ್, ಬಾಳ್ಳುಪೇಟೆ. | 10,000.00 |
| 4528. | ಐಗೂರು ಮನೆತನದವರು ಮತ್ತು ಕುಟುಂಬವರ್ಗದವರು ಎಸಳೂರು ಹೋ॥ ಸಕಲೇಶಪುರ ತಾ॥ | 1,33,520.00 |
| 4529. | ಶ್ರೀ ಹಾರಳ್ಳಿ ಮನೆತನದವರಿಂದ ಸೋಮವಾರಪೇಟೆ ತಾ॥ ಕೊಡಗು ಜಿಲ್ಲೆ. | 1,15,001.00 |
| 4530. | ಶ್ರೀ ಎ.ಬಿ. ರವೀಂದ್ರಬಾಬು 1ನೇ ಮುಖ್ಯರಸ್ತೆ, ಶೇಷಾದ್ರಿಪುರಂ, ಬೆಂಗಳೂರು. | 2,001.00 |
| 4531. | ಶ್ರೀ ಮಲ್ನಾಡ್ ವೀರಶೈವ ಸಮಾಜ(ರಿ.) ಸಕಲೇಶಪುರ ತಾ॥ ಹಾಸನ ಜಿಲ್ಲೆ. | 1,01,100.00 |
| 4532. | ಶ್ರೀ ಟಿ.ಪಿ. ಮಹೇಶ್‌ಚಂದ್ರ ವಿಜಯನಗರ, ಬೆಂಗಳೂರು. | 1,00,000.00 |
| 4533. | ಶ್ರೀ ಮಲ್ಲಿಕಾರ್ಜುನ ಭಾಷೇ ಹಿಯರ್ ಎಂ.ಡಿ., ಗೌತಮ್ ಜಾಹ್ನವಿ ಕನ್‌ಸ್ಟ್ರಕ್ಷನ್ ಪ್ರೈ.ಲಿ. ಕುಮಾರಪಾರ್ಕ್ ಪಶ್ಚಿಮ, ಬೆಂಗಳೂರು. | 1,00,000.00 |
| 4534. | ಶ್ರೀ ಪಿ.ಕೆ. ಮರಿಮಾದಯ್ಯ ಹೆಚ್.ಎ.ಎಲ್. 3ನೇಹಂತ, ಬೆಂಗಳೂರು. | 1,001.00 |
| 4535. | ಶ್ರೀ ಮುರುಳಿಕೃಷ್ಣ ಸಂಪಂಗಿರಾಮನಗರ, ಬೆಂಗಳೂರು. | 2,001.00 |
| 4536. | ಶ್ರೀಮತಿ ಪಾರ್ವತಮ್ಮ ಬಿನ್ ಬಾದಾಮಿ ನಂಜಪ್ಪ ಕೆ.ಆರ್. ಮೊಹಲ್ಲಾ, ಮೈಸೂರು. | 1,000.00 |
| 4537. | ಶ್ರೀ ಹೆಚ್.ಎಂ. ಸಿದ್ದಪ್ಪ, ಮುಖ್ಯ ಶಿಕ್ಷಕರು, ಎಸ್.ಜೆ.ವಿ.ಕೆ. ಚೆನ್ನೇನಹಳ್ಳಿ | 1,500.00 |
| 4538. | ಶ್ರೀಮತಿ ಜ್ಯೋತಿ ಬಿ. ಪಂಥ್, ಕೇರಾಫ್ ಎಂ.ವಿ. ಅನಂತ್ ಜಯನಗರ ಪಶ್ಚಿಮ, ತುಮಕೂರು. | 4,166.00 |
| 4539. | ಶ್ರೀಮತಿ ಶಾಂತಮ್ಮ ಈರಪ್ಪ ಮತ್ತು ಸಹೋದರರು ಅಗ್ರಹಾರದಾಸರಹಳ್ಳಿ, ಮಾಗಡಿ ರಸ್ತೆ, ಬೆಂ. | 3,500.00 |
| 4540. | ಶ್ರೀ ಕೆ.ಆರ್. ಬಸವನಗೌಡ ಮತ್ತು ಮಕ್ಕಳು ಕಾಫಿ ಪ್ಲಾಂಟರ್, ಗಂಗಾವರ, ಬೇಲೂರು ತಾ. | 2,020.00 |
| 4541. | ಶ್ರೀ ಕೆ.ಎಸ್. ರೇವಣಸಿದ್ದಪ್ಪ ನಾಯಕನಪಾಳ್ಯ, ಮಾಗಡಿ ತಾ. ಬೆಂ.ಗ್ರಾ.ಜಿ. | 2,001.00 |
| 4542. | ಶ್ರೀಮತಿ ಭಗೀರಥಮ್ಮ ಕೋಂ. ಶ್ರೀ ಲಿಂಗರಾಜು ತಣ್ಣೀರುಹಳ್ಳಿ, ಹಾಸನ ಜಿಲ್ಲೆ. | 1,001.00 |
| 4543. | ಶ್ರೀಮತಿ ಟಿ. ಅಶ್ವತ್ಥನಾರಾಯಣಶೆಟ್ಟಿ ವೆಸ್ಟ್ ಆಫ್ ಕಾರ್ಡ್ ರಸ್ತೆ, ಬೆಂಗಳೂರು. | 2,001.00 |
| 4544. | ಡಾ॥ಬಿ.ಎಸ್. ನಾಗಭೂಷಣ್ ಬಿನ್ ಪಿ.ಎಸ್. ಶಂಕರಲಿಂಗಪ್ಪ ಡಿ ಬ್ಲಾಕ್, ರಾಜಾಜಿನಗರ, ಬೆಂಗಳೂರು. | 50,005.00 |



## ದಾಸೋಹ ನಿಧಿ

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 4544. | ಶ್ರೀ ಪಿ.ಹೆಚ್. ಕುಮಾರ್, ದ್ವಿ.ದ.ಸ<br>ಶ್ರೀ ಸಿ. ಗ್ರಾ. ಪ್ರೌ.ಶಾಲೆ, ಗಂಜಲಗುಂಟೆ. | 2,001.00 |
| 4545. | ಶ್ರೀ ಬಿ.ಕೆ. ಮಹದೇವ್<br>ಬ್ಯಾಡರಹಳ್ಳಿ, ಕಟ್ಟಾಯ ಹೊ॥ ಹಾಸನ ಜಿಲ್ಲೆ. | 5,005.00 |
| 4546. | ಶ್ರೀ ಚೇತನ<br>2ನೇ ಬ್ಲಾಕ್, ಬಸವೇಶ್ವರನಗರ, ಬೆಂಗಳೂರು. | 5,001.00 |
| 4547. | ಹಿರಿಯ ಉಪನೋಂದಣಾಧಿಕಾರಿ ಮತ್ತು ಸಿಬ್ಬಂದಿವರ್ಗ<br>ಉಪನೋಂದಣಾಧಿಕಾರಿಗಳ ಕಛೇರಿ, ತಿಪಟೂರು | 1,571.00 |
| 4548. | ಶ್ರೀ ಎಂ.ಎಸ್. ನಾಗರಾಜ್<br>ಕೃಷ್ಣರಾಜಪುರ, ಬೆಂಗಳೂರು. | 5,000.00 |
| 4549. | ಶ್ರೀಮತಿ ನಾಗರತ್ನ ಸಿದ್ಧರಾಜು<br>ಕೃಷ್ಣರಾಜಪುರ, ಬೆಂಗಳೂರು. | 1 ,000.00 |
| 4550. | ಶ್ರೀ ಕಿರಣ್‌ಕುಮಾರ್ ಬಿನ್ ಪುಟ್ಟರಾಜು<br>ಸಿದ್ಧಲಿಂಗಯ್ಯನಪಾಳ್ಯ, ತುಮಕೂರು. | 2,001.00 |
| 4551. | ಶ್ರೀ ಎಂ.ಎನ್. ಬಸವರಾಜು ಬಿನ್ ಲೇಟ್ ಸಿದ್ಧಪ್ಪ<br>ಹೊರಕೇರಿ ಕುಂಬಾರ ಬೀದಿ, ಮಾಗಡಿ ಟೌನ್. | 11,111.00 |
| 4552. | ಶ್ರೀ ಎಲ್.ಕೆ. ಕೆಂಚಪ್ಪ .ನಿವೃತ್ತ ಶಿಕ್ಷಕರು,<br>ಕೊಂಡಜ್ಜಿ ರಸ್ತೆ, ಶಿವಪುರ, ದಾವಣಗೆರೆ. | 25,100.00 |
| 4553. | ಶ್ರೀ ಎಸ್.ಎಸ್. ನಂದೀಶ್<br>9ನೇ ಕ್ರಾಸ್, ಚಾಮರಾಜಪೇಟೆ, ಬೆಂಗಳೂರು. | 1,001.00 |
| 4554. | ಶ್ರೀ ಎಲ್.ಸಿ. ವೀರೇಶ್ ಬಿನ್. ಎಲ್.ವಿ. ಚೆನ್ನವೀರಯ್ಯ<br>3ನೇ ಕ್ರಾಸ್, ನಾಗರಭಾವಿ, ಬೆಂಗಳೂರು. | 1,08,000.00 |
| 4555. | ಶ್ರೀಮತಿ ಶಾರದಮ್ಮ ಕೋಂ. ಬಿ.ಪಿ. ಶ್ರೀಕಂಠಯ್ಯ<br>ನಂಜನಗೂಡು, ಮೈಸೂರು ಜಿಲ್ಲೆ. | 5,001.00 |
| 4556. | ಶ್ರೀ ಎಂ. ಶಿವನಂಜಪ್ಪ ಟಿ.ಎ. ಶಾಂತ<br>ಲಕ್ಷ್ಮಿಪುರಂ, 1ನೇ ಮೈನ್, ಮೈಸೂರು. | 2,001.00 |
| 4557. | ಶ್ರೀ ವೀರಣ್ಣ<br>ಎಸ್.ಐ.ಟಿ.ಬಡಾವಣೆ, ತುಮಕೂರು. | 8,000.00 |
| 4558. | ಶ್ರೀ ವೀರಶೈವ ನೌಕರರ ಕ್ಷೇಮಾಭಿವೃದ್ಧಿ ಸಂಘ<br>ಮಾಗಡಿ ತಾ., & ಟೌನ್, ಬೆಂ.ಗ್ರಾ.ಜಿಲ್ಲೆ. | 5,00,000.00 |
| 4559. | ಶ್ರೀ ಎಂ.ಸಿ. ಶ್ರೀಧರ ಎಸ್.ಡಿ.ಎ.<br>ಶ್ರೀ ಸ್ವಾ.ವಿ.ಶಾಲೆ., ಕುಪ್ಪೂರು, ಚಿ.ನಾ. ತಾ., | 2,000.00 |
| 4560. | ಶ್ರೀ ಚೈತ್ರ ಕಿರಣ್<br>ಜೆ.ಪಿ. ನಗರ 1ನೇ ಫೇಸ್, ಬೆಂಗಳೂರು. | 5,501.00 |
| 4561. | ಶ್ರೀಮತಿ ಮಾಲಿನಿ ಕೃಷ್ಣಮೋಹನ್<br>2ನೇ ಮೈನ್, ದೇವನಹಳ್ಳಿ, ಬೆಂಗಳೂರು. | 5,501.00 |
| 4562. | ಶ್ರೀ ಆರ್. ಸುರೇಶ್, ಅಸಿಸ್ಟೆಂಟ್ ಪ್ರೊಫೆಸರ್,<br>ಮೆಕ್ಯಾನಿಕಲ್ ಇಂ.ವಿಭಾಗ, ಎಸ್.ಐ.ಟಿ., ತು. | 2,000.00 |
| 4563. | ಶ್ರೀ ಶೀತಲ್ ಜೈನ್ ಬಿನ್ ಜಿತೇಂದ್ರಸ್ವಾಮಿ<br>2ನೇ ಸ್ಟೇಜ್, ಬಿ.ಎಸ್.ಕೆ. ಬೆಂಗಳೂರು. | 5,001.00 |
| 4564. | ಶ್ರೀಮತಿ ಸತ್ಯವತಿ ಎನ್.ಬಿ.<br>11ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು. | 1,001.00 |
| 4565. | ಶ್ರೀ ಬಿ. ಚನ್ನಬಸಪ್ಪ ಬಸಪ್ಪ ಬಂಡ್ರೇ<br>ಬಂಡ್ರೇಗ್ರಾಮ, ತರೀಕರೆ ತಾ., ಚಿಕ್ಕಮಗಳೂರು. | 40,000.00 |
| 4566. | ಶ್ರೀ ಬಿ. ಈಶ್ವರಪ್ಪ ಬಸಪ್ಪ ಬಂಡ್ರೇ<br>ಬಂಡ್ರೇಗ್ರಾಮ, ತರೀಕರೆ ತಾ., ಚಿಕ್ಕಮಗಳೂರು. | 40,000.00 |
| 4567. | ಶ್ರೀಮತಿ ಎಂ.ಎಸ್. ಪ್ರೇಮಾ ಉಜ್ಜನಪ್ಪ ಬಂಡ್ರೇ<br>ಬಂಡ್ರೇಗ್ರಾಮ, ತರೀಕರೆ ತಾ., ಚಿಕ್ಕಮಗಳೂರು. | 20,000.00 |
| 4568. | ಶ್ರೀ ಡಿ.ಎಸ್. ರಾಜೇಂದ್ರಪ್ರಸಾದ್, ಹಿರಿಯ ಶ್ರೇಣಿ<br>ಉಪನ್ಯಾಸಕರು, ಸಿವಿಲ್ ಇಂ. ವಿಭಾಗ,<br>ಎಸ್.ಐ.ಟಿ. ತುಮಕೂರು. | 8,500.00 |
| 4569. | ಶ್ರೀ ವಿ.ಜಿ. ಮಂಜುನಾಥ್<br>1ನೇ ಫೇಸ್, ಜೆ.ಪಿ. ನಗರ, ಬೆಂಗಳೂರು. | 10,000.00 |
| 4570. | ಶ್ರೀಮತಿ ವನಿತಾಶೆಟ್ಟಿ – ಸಂಜೀವ್ ಭಟ್ಟಗುಡ್ಡೇ<br>ಬೆಜಯ್, ಮಂಗಳೂರು. | 50,000.00 |
| 4571. | ಶ್ರೀಮತಿ ಯು.ಎ. ಗಾಂಧಿ ಕೇರಾಫ್ ಎ.ಸಿ. ಗಾಂಧಿ<br>ಕಾರ್‌ವಾರ್ ರಸ್ತೆ, ಹುಬ್ಬಳ್ಳಿ. | 2,000.00 |
| 4572. | ಶ್ರೀ ಶರತ್ ಚೆನ್ನಬಸಪ್ಪ<br>2ನೇ ಮುಖ್ಯರಸ್ತೆ, ಚಾಮರಾಜಪೇಟೆ. ಬೆಂ., | 1,011.00 |
| 4573. | ಕರ್ನಾಟಕ ರಾಜ್ಯ ಸರಕಾರಿ ನೌಕರರ ಸಂಘ.,<br>ಜಿಲ್ಲಾ ಘಟಕ, ರಾಯಚೂರು. | 1,101.00 |
| 4574. | ಮಾನಸ ಬುದ್ಧಿಮಾಂದ್ಯ ಮಕ್ಕಳ ಶಾಲೆ<br>ಬಾಲಭವನ, ಎಂ.ಜಿ.ರಸ್ತೆ, ತುಮಕೂರು. | 1,001.00 |
| 4575. | ಕು॥ ನಂದಿನಿ ಬಿನ್ ಕೆ.ಪಿ. ಚನ್ನಬಸಪ್ಪ ಕೇರಾಫ್<br>ವಿಜಯಕುಮಾರ್, ವಾಲ್ಮೀಕಿನಗರ, ತುಮಕೂರು. | 4,000.00 |
| 4576. | ಶ್ರೀ ವಿಶ್ವನಾಥ್ ಕೋಂ. ಧನಲಕ್ಷ್ಮಿ<br>ನಂದಿನಿ ಲೇಔಟ್, ಬೆಂಗಳೂರು. | 2,001.00 |
| 4577. | ಶ್ರೀಮತಿ ಸುಶೀಲಮ್ಮ ಮದರ್ ಆಫ್ ಎಂ. ಜ್ಞಾನಮಣಿ<br>ಕಾಯಿಪೇಟೆ, ಗುಬ್ಬಿ ಟೌನ್. ಗುಬ್ಬಿ. | 4,500.00 |
| 4578. | ಶ್ರೀಮತಿ ಉಮಾ ಮತ್ತು ಮಕ್ಕಳು<br>2ನೇ ಕ್ರಾಸ್, ಸಿದ್ಧಗಂಗಾ ಬಡಾವಣೆ, ತುಮಕೂರು. | 2,500.00 |
| 4579. | ಶ್ರೀ ಶಿವರುದ್ರಯ್ಯ<br>ವೆಂಕಟಾಪುರ ರಸ್ತೆ, ಕೋರಮಂಗಲ, ಬೆಂಗಳೂರು. | 2,001.00 |
| 4580. | ಡಾ॥ ರಾಜಶೇಖರ್ ಪವಾಡ ಶೆಟ್ಟರ್<br>ಶ್ರೀ ಸಾಯಿಶ್ರುತಿ ಡಯೋಸ್ನಾಸ್ಟಿಕ್ ಸೆಂಟರ್, ಗದಗ್. | 10,000.00 |
| 4581. | ಶ್ರೀ ಆರ್. ಪದ್ಮರಾಜು ಮತ್ತು ಸಹೋದರರು<br>ಬಾಸ್ಕೋನಗರ, ಟಿ.ಸಿ. ಪಾಳ್ಯ ಅಂಚೆ, ಬೆಂಗಳೂರು. | 2,001.00 |
| 4582. | ಶ್ರೀಮತಿ ಹೆಚ್. ವಸಂತ<br>ದೇವಸಂದ್ರ, ಕೆ.ಆರ್. ಪುರಂ., ಬೆಂಗಳೂರು. | 2,001.00 |

–ಮುಂದುವರೆಯುತ್ತದೆ.



ಶ್ರೀಮಠದಲ್ಲಿ ಸ್ವಾತಂತ್ರ್ಯ ದಿನಾಚರಣೆಯನ್ನು ಪರಮಪೂಜ್ಯ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ನೆರವೇರಿಸಲಾಯಿತು. ಈ ಸಂದರ್ಭದಲ್ಲಿ ಸಚಿವ ಶ್ರೀ ಸಿ. ಚನ್ನಿಗಪ್ಪ, ಖ್ಯಾತ ಕೈಗಾರಿಕೋದ್ಯಮಿ ಶ್ರೀ ಎ.ಎಸ್. ಪಾಟೀಲ್, ಶ್ರೀ ಗೋವಿಂದರಾಜ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಜ್ಞಾನಪೀಠ ಪ್ರಕಾಶನದ ವತಿಯಿಂದ ಹೊರತಂದ ರಾಜ್ಯ ಶಿಕ್ಷಣ ಮಾರ್ಗದರ್ಶಿ ೨೦೦೭ನ್ನು ಪೂಜ್ಯ ಶ್ರೀಗಳು ಶ್ರೀಮಠದಲ್ಲಿ ಲೋಕಾರ್ಪಣೆ ಮಾಡಿದರು.



ತುಮಕೂರು ಎ.ಪಿ.ಎಂ.ಸಿ. ಅಧ್ಯಕ್ಷರಾಗಿ ಆಯ್ಕೆಯಾದ ಶ್ರೀ ನರುಗನಹಳ್ಳಿ ವಿಜಯಕುಮಾರ್ ಮತ್ತು ಸ್ನೇಹಿತರು ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಶ್ರೀಗಳವರ ದಿವ್ಯಾಶೀರ್ವಾದ ಪಡೆದರು.



ಮೈಸೂರು ಪೇಪರ್ ಮಿಲ್ಸ್ ಅಧ್ಯಕ್ಷ ಶ್ರೀ ಬಿ. ಸುರೇಶ್‌ಗೌಡ ಅವರು ಜುಲೈ ೨೭ ರಂದು ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಶ್ರೀಗಳವರ ದಿವ್ಯಾಶೀರ್ವಾದ ಪಡೆದರು.




ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜಿನಲ್ಲಿ ಸ್ಫೂರ್ತಿ, ಎನ್.ಎಸ್.ಎಸ್. ಕ್ರೀಡಾ ಚಟುವಟಿಕೆಗಳ ಉದ್ಘಾಟನೆ ಹಾಗೂ ಪ್ರಥಮ ಪದವಿ ವಿದ್ಯಾರ್ಥಿನಿಯರ ಸ್ವಾಗತ ಸಮಾರಂಭವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಉದ್ಘಾಟಿಸಿದರು.



ಪರಮಪೂಜ್ಯ ಶ್ರೀಗಳವರ ಜನ್ಮ ಶತಮಾನೋತ್ಸವದ ವರ್ಷಾಚರಣೆಯ ಅಂಗವಾಗಿ ತುಮಕೂರಿನಲ್ಲಿ ಶ್ರೀಮತಿ ಕಾತ್ಯಾಯಿನಿ ರುದ್ರಮೂರ್ತಿ ಅವರ ಮನೆಯಲ್ಲಿ ಧರ್ಮಗೋಷ್ಠಿ ನಡೆಯಿತು.

Cover printed at : Geetanjali Graphics, # 4, M.S.R. Indl. Estate, Bangalore-54. Ph : 2360408